# ಆಲಿವರ್ ಟ್ವಿಸ್ಟ್

**ಚಾರ್ಲ್ಸ್ ಡಿಕೆನ್ಸ್ ಮಹಾಕವಿಯ**

**ಮೂಲಕಾದಂಬರಿಯ ಸಂಗ್ರಹ**

ಸಂಗ್ರಹಕಾರರು :

**ಜಿ. ಪಿ. ರಾಜರತ್ನಂ**

**ಎಸ್. ಎಸ್. ಎನ್. ಬುಕ್ ಡಿಪೊ**

೧೯೪೭] ನ್ಯೂ ಮಾರ್ಕೆಟ್, ಬೆಂಗಳೂರು [ರೂ. ೧/೮

[ಎಲ್ಲ ಹಕ್ಕುಗಳನ್ನು ಕಾದಿರಿಸಿದೆ]

## ಜಿ. ಪಿ. ರಾಜರತ್ನಂ ಬರೆದ ಹೊಸ ಪುಸ್ತಕಗಳು

-೦

ಗೌತಮ ಬುದ್ಧ
ಬಾ ಕರೂ ಬಾ
ಗೋಳೂರಿನ ಗಾಯಕರು
ಮಕ್ಕಳ ಮುಂಛೌಸನ್
ಪಂಡಿತನ ನೆರಳು
ತೆನಾಲಿ ರಾಮ
ಚಿಕ್ಕಮಕ್ಕಳ ಏಸಾಪ್
ಪುಟಾಣಿ ಪಂಚತಂತ್ರ
ಲೋಹ ವರಾಹ

ಐದರಿಂದ ಹದಿನೈದು ವರುಷದ ವರೆಗಿನ ಮಕ್ಕಳಿಗೆ
ಸ್ವಚ್ಛವಾದ ಶುಚಿಯಾದ ಸಚಿತ್ರವಾದ ಸಾಹಿತ್ಯ



ಮುದ್ರಣಕಾರರು :
ಬಿ. ಎಸ್. ನಾರಾಯಣರಾವ್
"ಓಂಕಾರ್ ಪ್ರೆಸ್", ಗೌಡನಪೇಟೆ, ಬೆಂಗಳೂರು ನಗರ

# ಬಿನ್ನಹ

**"ಆಲಿವರ್ ಟ್ವಿಸ್ಟ್"** ಎಂಬುದು ಒಬ್ಬ ಬಡಹುಡುಗನ ಕಷ್ಟನಿಷ್ಠುರ ಗಳನ್ನು ಚಿತ್ರಿಸುವ ಕಾದಂಬರಿ. ಇಲ್ಲಿ ಮುಂದಿನ ಪುಟಗಳಲ್ಲಿರುವುದು ಈ ಕಾದಂಬರಿಯ ಸಂಗ್ರಹ. ಮೂಲ ಕಾವಂಬರಿ ಈ ಸಂಗ್ರಹಕ್ಕೆ ಮೂರು ನಾಲ್ಕರಷ್ಟು ದೊಡ್ಡದಾಗಿದೆ. ಈ ಮೂಲಕಾದಂಬರಿಯನ್ನು ಬರೆದವನು **ಚಾರೆಲ್ಸ್ ಡಿಕೆನ್ಸ್** ಎಂಬ ಇಂಗ್ಲೆಂಡ್ ದೇಶದ ಒಬ್ಬ ಮಹಾಕವಿ. ಆತನು ಈ ಆಲಿವರ್ ಟ್ವಿಸ್ಟ್ ಬರೆದು ಇಂದಿಗೆ **110 ವರುಷ**ಗಳಾಗಿವೆ.

ಚಾರೆಲ್ಸ್ ಡಿಕೆನ್ಸ್ ೧೮೧೨ರಲ್ಲಿ ಹುಟ್ಟಿದ. ಆತನ ತಂದೆ ಒಂದು ನೌಕಾಕಾರ್ಯಾಲಯದಲ್ಲಿ ಗುಮಾಸ್ತನಾಗಿದ್ದ. ಡಿಕೆನ್ಸ್‌ಗೆ ಇನ್ನೂ ಹತ್ತು ವರುಷ ವಯಸ್ಸಾಗುವ ವೇಳೆಗೆ, ಆತನ ತಂದೆ ಇದ್ದುದನ್ನೆಲ್ಲ ದುಂದು ಮಾಡಿ, ಸಾಲಗಾರರ ಕೈಯಲ್ಲಿ ನರಳಿ, ಸೆರೆಮನೆಯನ್ನು ಸೇರಬೇಕಾಯಿತು. ಆಗ ಮನೆಯನ್ನು ನಿರ್ವಹಿಸುವ ಭಾರ ಆ ಹುಡುಗನ ಮೇಲೆ ಬಿತ್ತು. ಅದಕ್ಕಾಗಿ ಆತ ಬೂಟ್ಸಿಗೆ ಬಳಿಯುವ ಬಣ್ಣಗಳನ್ನು ತಯಾರಿಸುವ ಒಂದು ಕಾರಖಾನೆಯಲ್ಲಿ ಕೂಲಿಕೆಲಸಕ್ಕೆ ಸೇರಿದ. ಆ ಬಣ್ಣದ ಸೀಸೆಗಳ ಮೇಲೆ ಚೀಟಿ ಅಂಟಿಸುವ ಕೆಲಸಕ್ಕೆ ಅವನಿಗೆ ವಾರಕ್ಕೆ ಆರು ಷಿಲ್ಲಿಂಗ್ ಕೂಲಿ ಕೊಡುತ್ತಿದ್ದರು.

ಆದರೆ ಡಿಕೆನ್ಸಿನ ಅದೃಷ್ಟ ಚೆನ್ನಾಗಿತ್ತು. ಆ ಬಡತನ ಬಹಳ ದಿವಸ ನಿಲ್ಲಲಿಲ್ಲ. ಬೇಗನೆ ಅವನು ಆ ಕೂಲಿ ಕೆಲಸವನ್ನು ಬಿಟ್ಟು, ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಿ, ನ್ಯಾಯವಾದಿಯ ವೃತ್ತಿಗೆ ಬಂದ.

ಆದರೆ ಡಿಕೆನ್ಸಿಗೆ ತಾನು ಬರಹಗಾರನಾಗಬೇಕೆಂದು ಬಹಳ ಆಸೆಯಿತ್ತು. ಅದು ಆತನ ೨೫ನೇ ವಯಸ್ಸಿನ ವೇಳೆಗೆ ಈಡೇರಿತು. 'ಷಾರ್ಟ್

ಹ್ಯಾಂಡ್ ' ಎಂಬ ಶೀಘ್ರಲಿಪಿಯನ್ನು ಕಲಿತು, ವರ್ತಮಾನಪತ್ರವೊಂದ ರಲ್ಲಿ ವರದಿಕಾರನಾಗಿ ಸೇರಿದ. ಅಲ್ಲಿಯೇ ಆತನ ಮೊದಲ ಕಾದಂಬರಿಯೂ ಸಕಲಜನಪ್ರಿಯವೂ ಆದ **"ಪಿಕ್‌ವಿಕ್ ಪೇಪರ್ಸ್"** ಎಂಬುದು ತಿಂಗಳು ತಿಂಗಳಿಗೂ ಭಾಗಭಾಗವಾಗಿ ಪ್ರಕಟವಾಯಿತು. ಅದೇ ಕಾಲದಲ್ಲಿಯೇ 'ಪಿಕ್‌ವಿಕ್ ಪೇಪರ್ಸ್' ಇನ್ನೂ ಪ್ರಕಟವಾಗುತ್ತಿದ್ದಾಗಲೇ ಈ **'ಆಲಿವರ್ ಟ್ವಿಸ್ಟ್'** ಕೂಡ ಭಾಗಭಾಗವಾಗಿ (೧೮೩೭-೩೯) ಪ್ರಕಟವಾಯಿತು.

ಅನಂತರ ಜನರಿಗೆ ಡಿಕೆನ್ಸಿನ ಹುಚ್ಚು ಹಿಡಿಯಿತು. ಆತನಾದರೂ ಮಾರ್ಟಿನ್ ಕಸಲ್‌ವಿಟ್, ಹಾರ್ಡ್ ಟೈಮ್ಸ್, ನಿಕಲಸ್ ನಿಕಲ್‌ಬಿ, ಬಾರ್ನಬಿ ರಡ್ಜ್, ಡೇವಿಡ್ ಕಾಪರ್‌ಫೀಲ್ಡ್, ಡಾಂಬಿ ಎಂಡ್ ಸನ್, ಬ್ಲೀಕ್ ಹೌಸ್, ಟೇಲ್ ಆಫ್ ಟು ಸಿಟೀಸ್, ಲಿಟಲ್ ಡಾರಿಟ್, ಅವರ್ ಮ್ಯೂಚುಯಲ್ ಫ್ರೆಂಡ್, ಗ್ರೇಟ್ ಎಕ್ಸ್‌ಪೆಕ್ಟೇಷನ್ಸ್, ಲೈಫ್ ಆಫ್ ಎಡ್ವಿನ್ ಡ್ರುಡ್, ಕ್ರಿಸ್‌ಮಸ್ ಕೆರಾಲ್—ಮುಂತಾದ ಅನೇಕ ಕಾದಂಬರಿ ಗಳನ್ನು ಬರೆದು ಲೋಕವಿಖ್ಯಾತನಾದನು. ಈ ಕಾದಂಬರಿಗಳಲ್ಲೆಲ್ಲ ಆತನಿಗೇ ಅತಿಪ್ರಿಯವಾದ, ಆತನ ದೃಷ್ಟಿಯಲ್ಲಿ ಅತ್ಯುತ್ತಮವಾದ ಕಾದಂ ಬರಿಯೆಂದರೆ ಆತನ **"ಡೇವಿಡ್ ಕಾಪರ್‌ಫೀಲ್ಡ್".** ಆತನ ವಾಚಕರೂ ಸಾಮಾನ್ಯವಾಗಿ ಈ ಅಭಿಪ್ರಾಯವನ್ನೇ ಒಪ್ಪುತ್ತಾರೆ.

ಆತ ತನ್ನ ಕೊನೆಗಾಲದಲ್ಲಿ ಬರೆಯುತ್ತಿದ್ದ ಕಾದಂಬರಿ—"ಎಡ್ವಿನ್ ಡ್ರುಡ್." ಇದನ್ನು ಮುಗಿಸದೆಯೆ ಆತ ಮಧ್ಯದಲ್ಲಿ ತೀರಿಕೊಂಡ. ಮೃತನಾದಾಗ ಆತನಿಗೆ ಇನ್ನೂ 58 ವಯಸ್ಸು, ಅಷ್ಟೆ. ಲಂಡನ್ನಿನ ವೆಸ್ಟ್ ಮಿನ್‌ಸ್ಟರ್ ಅಬೆ ಎಂಬ ಪ್ರಖ್ಯಾತ ಧರ್ಮ ಮಂದಿರದಲ್ಲಿ, ಇಂಗ್ಲೆಂಡಿನ ಪ್ರಮುಖ ಕವಿಗಳನ್ನು ಸಮಾಧಿ ಮಾಡಿರುವ ಕಡೆ ಆತನನ್ನೂ ಸಮಾಧಿಮಾಡಿ, ಇಂಗ್ಲೆಂಡ್ ಆತನನ್ನು ಗೌರವಿಸಿತು.

ಇಂತಹ ಪ್ರಸಿದ್ಧ ಕವಿಯ ಮುಖ್ಯಕೃತಿಗಳಲ್ಲಿ ಒಂದಾದ, ಅದರಲ್ಲೂ ಸಣ್ಣಮಕ್ಕಳಿಗೆ ಲೋಕದಾದ್ಯಂತ ಪ್ರಿಯವಾದ, ಆಲಿವರ್ ಟ್ವಿಸ್ಟನ್ನು

ನಮ್ಮ ಕನ್ನಡ ಮಕ್ಕಳಿಗೆ ತಂದು ಕೊಡಲು ಇಲ್ಲಿ ಪ್ರಯತ್ನಿಸಿದ್ದೇನೆ. ಈ ಪ್ರಯತ್ನದಲ್ಲಿ ಡಿಕೆನ್ಸಿನ ಕಾವ್ಯದ ಅನೇಕ ಅಂಶ ಕೈಬಿಟ್ಟುಹೋಗಿದೆ ಎಂಬುದು ನಿಜ. ಆದರೂ ಕಥೆ ಕೆಡದ ಹಾಗೆ, ಮುಖ್ಯ ಪಾತ್ರಗಳ ಕಳೆ ಆದಷ್ಟು ಉಳಿಯುವ ಹಾಗೆ, ಇಂಗ್ಲಿಷು ಜನಜೀವನದ 'ವಾಸನೆ' ಅದಕ್ಕೆ ಅಪರಿಚಿತರಾದ ನಮ್ಮ ಮಕ್ಕಳಿಗೆ ಅನಾವಶ್ಯಕವಾದ ಹೊರೆಯಾಗದ ಹಾಗೆ, ಡಿಕೆನ್ಸಿಗೆ ಬಡವರ ಬಗ್ಗೆ ಇದ್ದ ಅಪಾರವಾದ ಕರುಣೆಯ ಛಾಯೆ ಕೊರೆಯಾಗದ ಹಾಗೆ ಈ ಕಾದಂಬರಿಯನ್ನು ಸಂಗ್ರಹಿಸಿದ್ದೇನೆ.

ಈ ಕತೆಯಲ್ಲಿ ಬರುವ ಇಂಗ್ಲಿಷ್ ಜನರ ಹೆಸರುಗಳು ನಮ್ಮ ಮಕ್ಕಳಿಗೆ ಅಪರಿಚಿತವಾದುದರಿಂದ, ಆ ಹೆಸರುಗಳನ್ನೂ ಕತೆಯಲ್ಲಿ ಅವು ಗಳಿಗಿರುವ ಸಂಬಂಧವನ್ನೂ ಸ್ಥೂಲವಾಗಿ ಮಗ್ಗಲು ಪುಟದಲ್ಲಿ ಕಾಣಿಸಿ ದ್ದೇನೆ. ಕತೆಯನ್ನು ಓದಲು ತೊಡಗುವುದಕ್ಕೆ ಮೊದಲು ಒಂದು ಸಲ ಆ ಹೆಸರುಗಳ ಪಟ್ಟಿಯನ್ನು ಓದಿಕೊಂಡರೆ ಕತೆಯನ್ನು ಅನುಸರಿಸುವುದಕ್ಕೆ ಸಹಾಯವಾಗುತ್ತದೆ. ಆ ಪಾತ್ರಗಳು ಮೊದಲ ಬಾರಿಗೆ ಯಾವ ಪುಟ ದಲ್ಲಿ ಕಾಣಿಸಿಕೊಳ್ಳುತ್ತವೆಯೋ ಆ ಪುಟದ ಸಂಖ್ಯೆಯನ್ನೂ ಅಲ್ಲೇ ಮಗ್ಗುಲಲ್ಲಿ ಕಾಣಿಸಿದ್ದೇನೆ.

ನಮ್ಮ ಮಕ್ಕಳ ಮೇಲೆ ಇದು ಹೇಗೆ ಪರಿಣಾಮವಾಗುತ್ತದೆ ಎಂಬು ದನ್ನು ನೋಡಿಕೊಂಡು, ಮುಂದೆ **"ಡೇವಿಡ್ ಕಾಪರ್‌ಫೀಲ್ಡ್"** ಮತ್ತು **"ಪಿಕ್‌ವಿಕ್ ಪೇಪರ್ಸ್"** ಈ ಎರಡನ್ನೂ ಕನ್ನಡಕ್ಕೆ ಸಂಗ್ರಹಿಸಬೇಕೆಂದಿ ದ್ದೇನೆ. ಆದ್ದರಿಂದ ಈ ಸಂಗ್ರಹವನ್ನು ಓದಿದವರು ಯಾರಾದರೂ ತಮ್ಮ ಅಭಿಪ್ರಾಯಗಳನ್ನೂ ಸಲಹೆಗಳನ್ನೂ ಕಳುಹಿಸಿದರೆ, ಅವರಿಗೆ ಕೃತಜ್ಞನಾಗಿರುತ್ತೇನೆ.

—**ಜಿ. ಪಿ. ರಾಜರತ್ನಂ**

# ಪಾತ್ರಗಳ ಪರಿಚಯ

ಆಲಿವರ್ ಟ್ವಿಸ್ಟ್—ಈ ಪುಸ್ತಕದಲ್ಲಿರುವುದು ಈ ಬಡಹುಡುಗನ ಕಥೆ. (2)

ಬಂಬಲ್—ಆಲಿವರ್ ಇದ್ದ ಅನಾಥಾಲಯದ ಒಬ್ಬ ಅಧಿಕಾರಿ. (3)

ಸುಸಾನ್—ಒಬ್ಬಳು ಮನೆಕೆಲಸದವಳು. (3)

ಸವರ್‌ಬೆರಿ—ಆಲಿವರನ್ನು ಮೊದಲು ಕೆಲಸಕ್ಕೆ ಇಟ್ಟುಕೊಂಡವನು. (27)

ಛಾರ್ಲೆಟ್—ಸವರ್‌ಬೆರಿಯ ಮನೆಕೆಲಸದ ಹುಡುಗಿ. (32)

ನೋಹ ಕ್ಲೇಪೋಲ್—ಸವರ್‌ಬೆರಿಯ ಮನೆಕೆಲಸದ ಹುಡುಗ. (34)

ಡಿಕ್—ಆಲಿವರನ ಸ್ನೇಹಿತ. (50)

ಜಾನ್ ಡಾಕಿನ್ಸ್—ಆಲಿವರನ್ನು ಫ್ಯಾಗಿನ್ ಎಂಬವನ ಕಳ್ಳರಕೂಟಕ್ಕೆ ಕರೆದೊಯ್ದ "ಕಳ್ಳಕೊರಮ". (58)

ಫ್ಯಾಗಿನ್—ಆಲಿವರ್‌ಗೆ ಆಶ್ರಯಕೊಟ್ಟ ಕಳ್ಳರ ನಾಯಕ. (60)

ಚಾರ್ಲಿ ಬೇಟ್ಸ್—ಫ್ಯಾಗಿನ್ನಿನ ಶಿಷ್ಯರಲ್ಲೊಬ್ಬ. (62)

ಫ್ಯಾಂಗ್—ಪೋಲೀಸ್ ಅಧಿಕಾರಿ. (73)

ಬ್ರೌನ್ಲೊ—ಆಲಿವರನ ತಂದೆಯ ಸ್ನೇಹಿತ. (75)

ಗ್ರಿಮ್‌ವಿಗ್—ಬ್ರೌನ್ಲೋವಿನ ಗೆಳೆಯ (84)

ನ್ಯಾನ್ಸಿ—ಫ್ಯಾಗಿನ್ನಿನ ಗುಂಪಿನ ಒಬ್ಬಳು ಕಳ್ಳಿ. (91)

ಬಿಲ್ ಸೈಕ್ಸ್—ಫ್ಯಾಗಿನ್ನಿನ ಗುಂಪಿನ ಮಹಾಧೂರ್ತ. (93)

ಟೋಬಿ—ಸೈಕ್ಸಿನ ಸ್ನೇಹಿತ; ಕಳ್ಳ. (105)

ಮಿಸೆಸ್ ಮೇಯ್ಲಿ—ಆಲಿವರ್‌ಗೆ ಆಶ್ರಯಕೊಟ್ಟ ಮುದುಕಿ. (119)

ರೋಸ್—ಆಲಿವರನ ತಾಯಿಯ ತಂಗಿ. (119)

ಮಂಕ್ಸ್—ಆಲಿವರನ ಮಲಅಣ್ಣ. (123)

ಹ್ಯಾರಿ ಮೇಯ್ಲಿ—ಮಿಸೆಸ್ ಮೇಯ್ಲಿಯ ಮಗ (154)

# ವಿವರಣೆ


೧. ಆಲಿವರನ ಜನನ ಮತ್ತು ಬಾಲ್ಯ ೧
೨. ಆಲಿವರ್ ಇನ್ನಷ್ಟು ಕೇಳಿದ; ೧೧
೩. "ಆಲಿವರ್ ಬೇಕೇ ಆಲಿವರ್" ೧೬
೪. "ಯಾರಿಗೆ ಬೇಕು ಆಲಿವರ್?" ೨೭
೫. ಆಲಿವರನ ಅಭಿಮಾನ ೩೩
೬. ಆಲಿವರನ ಪಲಾಯನ ೪೮
೭. "ಕಳ್ಳಕೊರಮ" ೫೫
೮. ಆಲಿವರ್ ಕಲಿತ ವಿದ್ಯೆ ೬೪
೯. ಆಲಿವರನ ಹೊಸ ಸ್ನೇಹಿತ ೭೩
೧೦. ಇದು ಯಾರು? ೭೯
೧೧. ಆಲಿವರನ ಸತ್ವಪರೀಕ್ಷೆ ೮೨
೧೨. ಆಲಿವರ್ ಏನಾದ? ೯೦
೧೩. ಬ್ರೌನ್ಲೋ ಕಳವಳ ೧೦೧
೧೪. ಆಲಿವರ್ ಕಂಡ ಮೊದಲ ಕಳ್ಳತನ ೧೦೫
೧೫. ಆಲಿವರನ ಹೊಸ ಮಿತ್ರರು ೧೧೬
೧೬. ಸೈಕ್ಸಿನ ಕಡೆಗಾಲ ೧೨೭
೧೭. ಆಲಿವರನ ಅದೃಷ್ಟ ೧೪೦
೧೮. ಹಳೆಯ ಕತೆ ೧೪೮
೧೯. ಇನ್ನು ಉಳಿದ ಕತೆ ೧೫೪

## ಚಿತ್ರಗಳು


| | | |
|---|---|---|
| ೧. | ನನಗೆ ಇನ್ನಷ್ಟು ಬೇಕು | ೧೪ |
| ೨. | ಆಲಿವರ್ ಸೋಹನನ್ನು ಕೆಡವಿದ | ೩೮ |
| ೩. | ಕರವಸ್ತ್ರದ ಕಳವು | ೬೮ |
| ೪. | ಸೈಕ್ಸ್ ಮತ್ತು ನ್ಯಾನ್ಸಿ ಆಲಿವರನ್ನು ಹಿಡಿದದ್ದು | ೯೪ |
| ೫. | ಫ್ಯಾಗಿನ್ನಿನ ಗುಹೆಯಲ್ಲಿ ಆಲಿವರ್ | ೯೬ |
| ೬. | ಬಾಗಿಲು ತೆರೆಯಿತು | ೧೧೪ |
| ೭. | ಕಳ್ಳ ಸಿಕ್ಕಿಬಿದ್ದ | ೧೧೮ |
| ೮. | ಸೈಕ್ಸ್ ನಾಯನ್ನು ಕರೆದ | ೧೩೨ |
| ೯. | ಸೈಕ್ಸ್ ನೇಣುಬಿದ್ದ | ೧೩೯ |

# ಆಲಿವರ್ ಟ್ವಿಸ್ಟ್

## ಆಲಿವರನ ಜನನ ಮತ್ತು ಬಾಲ್ಯ

ಇಂಗ್ಲೆಂಡ್‌ದೇಶದ ಒಂದಾನೊಂದು ಹಳ್ಳಿಯಲ್ಲಿ, ಆ ಹಳ್ಳಿಯ ಒಂದಾನೊಂದು ಅನಾಥಾಲಯದಲ್ಲಿ, ಒಂದು ದಿನ ಒಬ್ಬ ಹೆಂಗಸು ಒಂದು ಮಗುವನ್ನು ಹೆತ್ತಳು. ಹುಟ್ಟಿದ ಆ ಮಗು ಉಸಿರಾಡುವುದೇ ಕಷ್ಟವಾಗಿತ್ತು. ಹೆರಿಗೆಯ ಕಾಲದಲ್ಲಿ ಸಹಾಯಮಾಡಿದ ವೈದ್ಯನೂ ಸೂಲಗಿತ್ತಿಯೂ ಆ ಮಗು ಬದುಕುವುದೋ ಇಲ್ಲವೋ ಎಂದು ಬಹುಹೊತ್ತು ಶಂಕೆಪಡುತ್ತಿದ್ದರು. ಆದರೆ ಆ ಮಗುವಿನದು ಗಟ್ಟಿಜೀವ ಆದಕಾರಣ ಅದು ಸ್ವಲ್ಪಹೊತ್ತಿನಲ್ಲಿಯೇ ಉಸಿರಾಡತೊಡಗಿ, ಮೆಲ್ಲಮೆಲ್ಲನೆ ಅಳಲು ಮೊದಲುಮಾಡಿ, ಬರುಬರುತ್ತ ಅನಾಥಾಲಯದ ಸೂರು ಕಿತ್ತುಹೋಗುವುದೋ ಎನ್ನುವಷ್ಟು ಜೋರಾಗಿ ಕಿರಿಚತೊಡಗಿತು.

ಅದುವರೆಗೆ ನಿಶ್ಶಕ್ತಿಯಿಂದ ಮಲಗಿಕೊಂಡಿದ್ದ ತಾಯಿ ಮಗುವಿನ ಅಳುವನ್ನು ಕೇಳಿ ಮೆಲ್ಲನೆ ಮುಖ ತಿರುಗಿಸಿ, "ಆ ಮಗುವನ್ನು ಇಲ್ಲಿ ಕೊಡಿ. ಒಂದು ಸಲ ನೋಡಿ, ಸಂತೋಷದಿಂದ ಸಾಯುತ್ತೇನೆ" ಎಂದಳು.

"ಛೆ, ಛೆ, ಹಾಗೆಲ್ಲಾ ಮಾತನಾಡಬಾರದು" ಎಂದು ವೈದ್ಯನೂ ಸೂಲಗಿತ್ತಿಯೂ ಎಷ್ಟೆಷ್ಟೋ ಸಮಾಧಾನ ಹೇಳಿದರೂ ಆ ತಾಯಿ "ಸಾಯುವ ಮೊದಲು ಒಂದೇ ಒಂದು ಸಲ ನನ್ನ ಮಗುವನ್ನು ಎತ್ತಿಕೊಂಡು ಮುದ್ದಾಡಿ ಸಂತೋಷದಿಂದ ಸಾಯುತ್ತೇನೆ" ಎಂದು ಕೈಚಾಚಿ ಬೇಡಿಕೊಂಡಳು.

ವೈದ್ಯನು ಮಗುವನ್ನು ಮೆಲ್ಲನೆ ಎತ್ತಿ ಆವಳ ತೋಳುಗಳಲ್ಲಿ ಇಟ್ಟ. ಅವಳು ಅರೆಗಳಿಗೆ ಮಗುವನ್ನು ದಿಟ್ಟಿಸಿನೋಡಿ, ಅದರ ನೆತ್ತಿಯ ಮೇಲೆ ಒಂದು ಮುತ್ತು ಒತ್ತಿ, ಕೈಯಿಂದ ಅದರ ಮುಖವನ್ನು ಸೇವರಿಸಿ, ಒಂದು ಸಲ ಬಿರುಗಣ್ಣು ಬಿಟ್ಟು ಸುತ್ತಲೂ ಬೆದರಿ ಬೆದರಿ ನೋಡಿದಳು. ಮೈ ಥರಥರನೆ ನಡುಗಿತು. ತಲೆ ಹಿಂದೆ ಬಿತ್ತು. ಅವಳು ಸತ್ತುಹೋದಳು.

ಮಗುವಂತೂ ಊರೂ ಕೇರಿಯೂ ಒಂದಾಗುವ ಹಾಗೆ ಕಿರಿಚುತ್ತಲೆ ಇತ್ತು. ತಾನು ತಾಯನ್ನು ಕಳೆದುಕೊಂಡು ತಬ್ಬಲಿಯಾಗಿ, ಯಾರ ಯಾರ ಕೈಯಲ್ಲಿ ಸಿಕ್ಕಿ ಏನೇನು ಕಷ್ಟಗಳನ್ನು ಅನುಭವಿಸಬೇಕಾಗಿತ್ತೋ ಅದನ್ನೆಲ್ಲ ತಿಳಿದಿದ್ದರೆ ಆ ಮಗು ಇನ್ನೂ ಗಟ್ಟಿಯಾಗಿ ಕಿರಿಚುತ್ತಿತ್ತೆಂದು ಕಾಣುತ್ತದೆ.

ಅದು ಹೇಗೂ ಇರಲಿ; ಆಲಿವರ್ ಅಂತೂ ಹುಟ್ಟಿದ ಕೆಲವೇ ಗಳಿಗೆ ಗಳಲ್ಲಿ ತನ್ನ ತಾಯನ್ನು ತಿಂದುಕೊಂಡು ತಬ್ಬಲಿಯಾದನು.

"ತಾಯಿ ಇಲ್ಲದ ತಬ್ಬಲಿಯನ್ನು ಇಲ್ಲಿ ಇಟ್ಟುಕೊಳ್ಳಲಾರೆವು. ಇಲ್ಲಿಂದ ಮೂರು ಮೈಲು ಆಚೆ ಇರುವ ಈ ಅನಾಥಾಲಯದ ಶಾಖೆಗೆ ಇದನ್ನು ಕಳುಹಿಸೋಣ" ಎಂದು ಅಲ್ಲಿನ ಅಧಿಕಾರಿಗಳು ಮಾತನಾಡಿ ಕೊಂಡು, ಹಾಗೆಯೇ ಮಾಡಿದರು. ಆ ಅನಾಥಾಲಯದ ಶಾಖೆಯಲ್ಲಿ ಹೀಗೇ ಇನ್ನೂ ಇಪ್ಪತ್ತು ಮೂವತ್ತು ಮಕ್ಕಳಿದ್ದರು. ಅಲ್ಲಿನ ಸುಖ ಹೇಳತೀರದು. ಮಲಗುವುದಕ್ಕೆ ತಾಯಿನೆಲ. ಹೆಚ್ಚಿಗೆ ತಿಂದರೆ ಹೊಟ್ಟೆ ನೋವು ಬರುತ್ತದೆಂದು ಅರೆಹೊಟ್ಟೆಗೆ ಗಂಜಿ. ಮೈಗೆ ತುಂಬ ಭಾರವಾಗ ಬಾರದೆಂದು ತೊಡಲು ಹರಕು ಚಿಂದಿ. ಇಂಥ ದಿವ್ಯವಾದ ಸುಖದಲ್ಲಿ ಆ ಮಕ್ಕಳನ್ನು ಬೆಳೆಸುವ ಹೆಂಗಸಿಗೆ ಅವಳ ಕಷ್ಟಕ್ಕಾಗಿ ಅನಾಥಾಲಯದವರು ಸಂಬಳ ಕೊಡುತ್ತಿದ್ದರು. ತಲಾ ಒಂದೊಂದು ಮಗುವಿಗೂ ಒಂದೊಂದು ವಾರಕ್ಕೆ ಏಳು ಪೆನ್ನಿಯಲ್ಲದೆ ಮೇಲೆ ಕೊಸರಿಗೆ ಅರ್ಧ ಪೆನ್ನಿ ಆ ಹೆಂಗಸಿಗೆ ಸಂಪಾದನೆಯಾಗುತ್ತಿತ್ತು.

ಈ ರೀತಿಯ ಪರಿಪೋಷಣೆಯಿಂದ ಮಕ್ಕಳು ಏನು ಮೈ ತುಂಬಿ ಕೊಂಡಾವು? ಹಾಗಾಗಿ, ಆಲಿವರ್, ಒಂಬತ್ತು ವರುಷಗಳಾದರೂ ಬರಿಯ ಮೂಳೆ ಚಕ್ಕಳ ಮಾತ್ರವಾಗಿದ್ದ. ಆದರೇನು? ಅವನ ಜೀವ ಗಟ್ಟಿಜೀವ ಎಂದು ಹಿಂದೆಯೇ ಹೇಳಲಿಲ್ಲವೆ? ಮೊದಲೇ ಗಟ್ಟಿಯಾಗಿದ್ದ ಜೀವ ಆ ಅನಾಥಾಲಯದ ಅರ್ಧಾಹಾರದಿಂದ ಇನ್ನಷ್ಟು ಗಟ್ಟಿಯಾಯಿತು, ಅಲ್ಲಿನ ಕಷ್ಟಕಾರ್ಪಣ್ಯಗಳ ಕುಲಿಮೆಯಲ್ಲಿ ಕಾದು ಕಬ್ಬಿಣವಾಗಿ ಮತ್ತಷ್ಟು ಗಟ್ಟಿಯಾಯಿತು. ಅಂತೂ, ಹಾಗೂ ಹೀಗೂ ಆಲಿವರ್ ಒಂಬತ್ತು ವರುಷ ಸಾಯದೆ ಬದುಕಿ ಬೆಳೆದ.

ಒಂದು ದಿನ, ಅವನ ಒಂಬತ್ತನೆಯ ಹುಟ್ಟಿದ ಹಬ್ಬ. ಓಹೋ, ಎಂಥ ಹುಟ್ಟಿದ ಹಬ್ಬ: ಆ ಮನೆಯಲ್ಲಿ ಆ ಮಕ್ಕಳೆನ್ನೆಲ್ಲ ನೋಡಿಕೊಂಡು, ಪ್ರತಿ ತಲೆಯೊಂದಕ್ಕೆ ವಾರವಾರವೂ ಏಳು ಪೆನ್ನಿಯಲ್ಲದೆ ಮೇಲೆ ಕೊಸರು ಅರ್ಧ ಪೆನ್ನಿ ಸಂಪಾದಿಸುತ್ತಿದ್ದ ಆ ಹೆಂಗಸು ಆ ದಿವಸ ಆಲಿವರನನ್ನೂ ಅವನ ಜೊತೆಯ ಇನ್ನಿಬ್ಬರು ತಬ್ಬಲಿಗಳನ್ನೂ ರಪರಪನೆ ಚಚ್ಚಿ, ನೆಲ ಮಾಳಿಗೆಯಲ್ಲಿ ಕೂಡಿಸಿ, ಬಾಗಿಲಿಗೆ ಚಿಲಕ ಹಾಕಿಬಿಟ್ಟಿದ್ದಳು. ಅಲ್ಲಿ ಅನ್ನ ನೀರಿಲ್ಲದೆ, ಜೊತೆಯ ಇಬ್ಬರು ತಬ್ಬಲಿಗಳೊಡನೆ ನಮ್ಮ ಆಲಿವರ್ ತನ್ನ ಒಂಬತ್ತನೆಯ ಹುಟ್ಟಿದ ಹಬ್ಬವನ್ನು ವಿಜೃಂಭಣೆಯಿಂದ ಗೋಳಾಡುತ್ತಾ ನೆರವೇರಿಸುತ್ತಿದ್ದನು.

ಆ ವೇಳೆಗೆ ಆ ಮನೆಯ ತೋಟದ ಬಾಗಿಲನ್ನು ತೆಗೆಯಬೇಕೆಂದು ಯಾವನೋ ಒಬ್ಬನು ಕಷ್ಟಪಡುತ್ತಿದ್ದುದನ್ನು ಆ ಮನೆಯ ಹೆಂಗಸು ಕಿಟಕಿಯಿಂದ ನೋಡಿ ಬೆಚ್ಚಿದಳು.

ಬಂದವನ ಹೆಸರು ಬಂಬಲ್. ಅವನು ಆ ಅನಾಥಾಲಯದ ಒಬ್ಬ ಅಧಿಕಾರಿ.

"ಬಂದೆ, ಬಂದೆ, ಬಂಬಲ್ ಮಹಾಶಯ." ಎಂದು ಆ ಮನೆಯಾಕೆ ಕಿಟಕಿಯ ಒಳಗಿಂದಲೇ ಕೂಗಿಕೊಂಡು, "ಏ, ಸುಸಾನ್, ಆ

ಹಾಳು ಆಲಿವರನನ್ನೂ ಆ ಇನ್ನೆರಡು ತಬ್ಬಲಿಗಳನ್ನೂ ಬೇಗ ಮೇಲೆ ಎಳೆದುಕೊಂಡು ಹೋಗಿ, ಚೆನ್ನಾಗಿ ಅವರ ಮುಖ ತೊಳೆ" ಎಂದು ತನ್ನ ಸೇವಕಿಗೆ ಆಜ್ಞೆ ಮಾಡಿ, "ಬಂದೆ, ಬಂದೆ, ಬಂಬಲ್ ಮಹಾಶಯ" ಎಂದು ಕೂಗಿಕೊಳ್ಳುತ್ತಾ ಓಡಿಬಂದು, ತೋಟದ ಬಾಗಿಲನ್ನು ತೆಗೆದಳು.

ಬಂಬಲ್‌ನ ಮುಖ ಕೋಪದಿಂದ ಕೆಂಡವಾಗಿತ್ತು. ತೆಗೆದ ತೋಟದ ಬಾಗಿಲನ್ನು ಕಾಲಿನಿಂದ ಒದ್ದು ವಟಗುಟ್ಟುತ್ತ ಮನೆಯೊಳಕ್ಕೆ ನಡೆದ. ಮನೆಯಾಕೆ ಅವನ ಹಿಂದೆಯೇ ಓಡುತ್ತ "ಛೆ, ಛೆ, ನೀವು ಎಷ್ಟು ಹೊತ್ತು ಕಾದಿರಬೇಕಾಯಿತು. ಈ ಮಕ್ಕಳ ಆಟವೆಂದರೇ ಹೀಗೆ. ಮಕ್ಕಳು ತೋಟದ ಬಾಗಿಲಿನ ಚಿಲಕ ಹಾಕಿದ್ದುದು ತಿಳಿಯಲೇ ಇಲ್ಲ" ಎಂದು ಹಲ್ಲು ಕಿರಿದಳು.

ಆದರೂ ಬಂಬಲ್‌ನ ಅಸಮಾಧಾನ ಇಳಿಯಲಿಲ್ಲ. "ಅನಾಥಾಲಯದ ಅಧಿಕಾರಿಗಳು ಮನೆಯ ಬಾಗಿಲಿಗೆ ಬಂದರೆ, ಹೀಗೇ ತಾನೆ ನೀವು ಮರ್ಯಾದೆ ಮಾಡುವುದು" ಎಂದು ಆಕ್ಷೇಪಿಸಿದನು.

"ಇಲ್ಲ, ಇಲ್ಲ, ಬಂಬಲ್ ಮಹಾಶಯ. ನೀವು ಬರುತ್ತೀರಿ ಎಂದು ಕೇಳಿದರೆ, ಪಾಪ, ಮಕ್ಕಳಿಗೆ ಎಷ್ಟೋ ಸಂತೋಷ. ನಿಮ್ಮ ಆಗಮನವನ್ನು ಅವರಿಗೆ ತಿಳಿಸಿ ಬರುವಷ್ಟರಲ್ಲಿ ಇಷ್ಟು ಹೊತ್ತಾಗಿಹೋಯಿತು. ದಯಮಾಡಿ ಕ್ಷಮಿಸಬೇಕು" ಎಂದು ಅವಳು ಅತಿ ವಿನಯದಿಂದ ಹೇಳಿದಳು.

ಅವಳ ವಿನಯವನ್ನು ಕಂಡು ಬಂಬಲ್ ಸ್ವಲ್ಪ ಶಾಂತನಾಗಿ, "ಇರಬಹುದು, ಇರಬಹುದು. ನಡೆಯಿರಿ, ಮನೆಯೊಳಕ್ಕೆ ಹೋಗೋಣ. ಮಾತನಾಡುತ್ತಾ ಇಲ್ಲಿಯೇ ನಿಲ್ಲಲು ನನಗೆ ವಿರಾಮವಿಲ್ಲ. ಕೆಲಸ ಕೈತುಂಬ ಇದೆ" ಎಂದನು.

ಇಬ್ಬರೂ ಮನೆಯೊಳಕ್ಕೆ ಬಂದರು. ಒಳಗಿನ ಹಜಾರದಲ್ಲಿ ಇಟ್ಟಿಗೆಯ ನೆಲದ ಮೇಲೆ ಮನೆಯಾಕೆ ಒಂದು ಕುರ್ಚಿ ಎಳೆದು ತಂದಿಟ್ಟಳು.

ಬಂಬಲ್ ತನ್ನ ಮುಂದೆ ಇದ್ದ ಮೇಜಿನ ಮೇಲೆ ತನ್ನ ಟೋಪಿಯನ್ನೂ ದೊಣ್ಣೆಯನ್ನೂ ಇರಿಸಿ, ಕುರ್ಚಿಯ ಮೇಲೆ ಕುಳಿತು, ಜೇಬಿನಿಂದ ಒಂದು ವಸ್ತ್ರವನ್ನು ಹೊರಗೆಳೆದು, ಮುಖದ ಮೇಲಿನ ಬೆವರನ್ನು ಒರಸಿಕೊಂಡು, ಮೇಜಿನ ಮೇಲಿದ್ದ ತನ್ನ ಟೋಪಿಯನ್ನು ನೋಡಿ, ಅದರ ಕಡೆಗೆ ಒಂದು ಮೆಲುನಗೆ ಬೀರಿದನು.

ಅನಂತರ ಬಂಬಲ್ "ಒಳ್ಳೆಯದು" ಎಂದು ತನ್ನ ಜೇಬಿನಿಂದ ಒಂದು ಸಣ್ಣ ಪುಸ್ತಕವನ್ನು ಹೊರಗೆಳೆದು, "ನಾವು ಆಲಿವರ್ ಟ್ವಿಸ್ಟ್ ಎಂದು ನಾಮಕರಣ ಮಾಡಿದ ಹುಡುಗನಿಗೆ ಈ ದಿವಸ ಒಂಬತ್ತು ವರುಷ ತುಂಬಿದೆ" ಎಂದನು.

"ಹೌದು, ಹೌದು. ದೇವರು ಅವನಿಗೆ ದೀರ್ಘಾಯುಸ್ಸು ಕೊಡ ಬೇಕು" ಎಂದು ಮನೆಯಾಕೆ ತನ್ನ ವಸ್ತ್ರದ ಸೆರಗಿನಿಂದ ಕಣ್ಣನ್ನು ಉಜ್ಜಿ ಕೊಂಡು ಅಳು ಬಂದ ಹಾಗೆ ನಟಿಸಿದಳು.

ಬಂಬಲ್ ತನ್ನ ಪುಸ್ತಕವನ್ನು ನೋಡುತ್ತಾ "ಅವನ ತಂದೆ ಯಾರೆಂಬುದನ್ನಾಗಲಿ ಅವನ ತಾಯಿಯ ಹೆಸರು ಅಂತಸ್ತುಗಳನ್ನಾಗಲಿ ತಿಳಿಸಿದವರಿಗೆ ಹತ್ತು ಪೌಂಡು ಬಹುಮಾನ ಕೊಡುತ್ತೇವೆ—ಎಂದು ನಾವು ಪ್ರಸಿದ್ಧಿಪಡಿಸಿದರೂ ಇದುವರೆಗೆ ಏನೂ ಸುದ್ದಿ ತಿಳಿದುಬಂದಿಲ್ಲ" ಎಂದನು.

"ಅಯ್ಯೋ, ಅಯ್ಯೋ! ಹೀಗೂ ಅನ್ಯಾಯ ಉಂಟೆ?" ಎಂದು ಮನೆಯಾಕೆ ಆಶ್ಚರ್ಯಪಟ್ಟಳು.

"ಆದ್ದರಿಂದ ಆಲಿವರನನ್ನು ಮುಂದೆ ಏನು ಮಾಡಬೇಕೆಂಬ ಭಾರ ನಮ್ಮ ಮೇಲೇ ಬಿದ್ದಿದೆ. ಅವನಿಗೆ ಈಗ ಒಂಬತ್ತು ವರುಷವಾಗಿರು ವದರಿಂದ ಅವನು ಇನ್ನು ಇಲ್ಲಿ ನಿಲ್ಲಬೇಕಾಗಿಲ್ಲ. ಅವನು ಪುನಃ ನಮ್ಮ ಅನಾಥಾಲಯಕ್ಕೆ ಬರಲಿ. ಅವನನ್ನು ಅಲ್ಲಿಗೆ ಕರೆದುಕೊಂಡು ಹೋಗು

ವುದಕ್ಕೋಸ್ಕರ ನಾನೇ ಸ್ವತಃ ಬಂಡಿದ್ದೇನೆ. ಎಲ್ಲಿ, ಅವನನ್ನು ಕರೆದು ಕೊಂಡು ಬಾ" ಎಂದು ಬಂಬಲ್ ಹೇಳಿದ.

"ಓಹೋ, ಇದೋ ಈಗ ನಾನೇ ಹೋಗಿ ಕರೆದುಕೊಂಡು ಬರುತ್ತೇನೆ" ಎಂದು ಅವಳು ಎದ್ದು ಒಳಗೆ ಹೋದಳು.

ಆ ವೇಳೆಗೆ ಆಗಲೆ ಆಲಿವರನಿಗೆ ಮುಖ ತೊಳೆದು, ಮೆತ್ತಿಕೊಂಡಿದ್ದ ಕೊಳೆಯನ್ನು ಎಷ್ಟು ತೆಗೆಯಬಹುದೋ ಅಷ್ಟು ತೆಗೆದು, ತಕ್ಕಮಟ್ಟಿಗೆ ಶುಚಿಯಾಗಿ ಮಾಡಿಯಾಗಿತ್ತು.

ಮನೆಯಾಕೆ ಅವನನ್ನು ಹಜಾರಕ್ಕೆ ಕರೆದುಕೊಂಡು ಬಂದು, ಬಂಬಲನನ್ನು ತೋರಿಸಿ, "ಇವರಿಗೆ ನಮಸ್ಕಾರ ಮಾಡು, ಆಲಿವರ್" ಎಂದಳು.

ಆಲಿವರ್ ನಡುಬಗ್ಗಿ, "ನಮಸ್ಕಾರ" ಎಂದ.

"ನನ್ನ ಸಂಗಡ ಬರುತ್ತೀಯಾ, ಆಲಿವರ್?" ಎಂದು ಬಂಬಲ್ ಗಂಭೀರವಾಗಿ ಕೇಳಿದ.

"ಓ, ಯಾರ ಸಂಗಡವಾದರೂ ಸರಿಯೆ, ಎಲ್ಲಿಗಾದರೂ ಸರಿಯೆ, ಸಂತೋಷವಾಗಿ ಬರುತ್ತೇನೆ" ಎಂದು ಆಲಿವರ್ ಹೇಳಿಬಿಡುತ್ತಿದ್ದನೋ ಏನೋ; ಆದರೆ ಅಷ್ಟರಲ್ಲೆ ಅವನು ಮನೆಯಾಕೆಯ ಮುಖವನ್ನು ನೋಡಿದ. ಅವಳು ಬಂಬಲನ ಕುರ್ಚಿಯ ಹಿಂದುಗಡೆ ಸೇರಿಕೊಂಡು, ಮುಖವನ್ನು ರೌದ್ರಾಕಾರ ಮಾಡಿಕೊಂಡು, "ನಿನಗೆ ಆಮೇಲೆ ಮಾಡುತ್ತೇನೆ, ತಾಳು" ಎಂಬ ಹಾಗೆ ಬಲಗೈ ಮುಷ್ಟಿಯನ್ನು ಮೇಲೆತ್ತಿ ಹೆದರಿಸುತ್ತಿದ್ದಳು.

ಅವಳ ಮುಷ್ಟಿಯ ರುಚಿಯನ್ನು ಅನೇಕ ಸಲ ಸವಿದು ಆಲಿವರನ ಬುದ್ಧಿ ಬಹಳ ಚುರುಕಾಗಿತ್ತು. ಆದ್ದರಿಂದಲೇ ಅವನು ತನ್ನ ಉತ್ಸಾಹವನ್ನು ಹಾಗೇ ಅಡಗಿಸಿಕೊಂಡು, "ಇವಳೂ ನನ್ನ ಜೊತೆಯಲ್ಲಿ ಬರುತ್ತಾಳೆಯೆ?" ಎಂದು ಬಂಬಲನನ್ನು ಕೇಳಿದ.

“ಇಲ್ಲ, ಇಲ್ಲ, ಇವಳು ನಿನ್ನ ಜೊತೆಯಲ್ಲಿ ಈಗ ಬರುವುದಿಲ್ಲ. ಆದರೂ, ಬೇಕಾದರೆ ಆಗಾಗ್ಗೆ ಬಂದು ನಿನ್ನನ್ನು ನೋಡಿಕೊಂಡು ಹೋಗುತ್ತಾಳೆ” ಎಂದು ಬಂಬಲ್ ಹೇಳಿದ.

ಅವಳು ಬರುವುದಕ್ಕಿಂತ ಬರದೆ ಇದ್ದರೇ ಸಾಕೆಂದು ಆಲಿವರ್ ಮನಸ್ಸಿನಲ್ಲಿಯೇ ಎಂದುಕೊಂಡರೂ, ದುಃಖವಾದಂತೆ ತೋರಿಸಿಕೊಂಡರೆ ಮಾತ್ರ ತನಗೆ ಕ್ಷೇಮವೆಂದು ಅವನಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ “ಅಯ್ಯೋ. ಇವಳನ್ನು ಬಿಟ್ಟುಹೋಗಬೇಕಲ್ಲ” ಎಂದು ಕಣ್ಣಲ್ಲಿ ನೀರು ತಂದುಕೊಂಡನು. ಅತ್ತು ಕಣ್ಣೀರು ಸುರಿಸುವುದಕ್ಕೆ ಆಲಿವರ್ ಏನೂ ಕಷ್ಟಪಡಬೇಕಾಗಿರಲಿಲ್ಲ. ಹೊಟ್ಟೆಗೆ ಏನೂ ಇಲ್ಲದ ಸಂಕಟವೊಂದು ಕಡೆ, ಸ್ವಲ್ಪಹೊತ್ತಿಗೆ ಮುಂಚೆ ಮನೆಯಾಕೆ ರಪರಪನೆ ಚಚ್ಚಿದ್ದ ನೋವೊಂದು ಕಡೆ—ಎರಡನ್ನೂ ಜ್ಞಾಪಿಸಿಕೊಂಡ ಒಡನೆಯೇ ಆಲಿವರನಿಗೆ ಕಣ್ಣೀರಿನ ಕೋಡಿ ಹರಿಯಿತು.

ಮನೆಯಾಕೆಯಾದರೂ ಅವನನ್ನು ಸಾವಿರ ಸಲ ತಬ್ಬಿಕೊಂಡು ತಾನೂ ಕಣ್ಣೀರು ಹಾಕಿದಳು. “ಇದಕ್ಕಿಂತ ಒಂದು ಚೂರು ರೊಟ್ಟಿ ಕೊಟ್ಟರೆ!” ಎಂದು ಆಲಿವರ್ ಎಂದುಕೊಂಡ. ಏನಾಶ್ಚರ್ಯ! ಮನೆಯಾಕೆ ಅವನ ಮನಸ್ಸಿನಲ್ಲಿದ್ದುದನ್ನು ತಿಳಿದಳೋ ಎಂಬಂತೆ, ಮನೆಯೊಳಕ್ಕೆ ಹೋಗಿ, ಒಂದು ಚೂರು ರೊಟ್ಟಿ ಮಾತ್ರವಲ್ಲ, ಅದಕ್ಕೆ ಬೆಣ್ಣೆಯನ್ನೂ ಸವರಿ ತಂದುಕೊಟ್ಟಳು. ಅವಳು ಹಾಗೆ ಮಾಡಿದುದರಲ್ಲಿ ಏನಾಶ್ಚರ್ಯ? “ಹುಡುಗ ಹಸಿದ ಮುಖದಿಂದ ಹೋದರೆ, ಅನಾಥಾಲಯದವರು ನೋಡಿ, ಇನ್ನು ಮುಂದೆ ಯಾವ ಮಕ್ಕಳನ್ನೂ ಕಳುಹಿಸದೆ ಹೋದರೆ ಸಂಪಾದನೆಗೆ ಸೊನ್ನೆ ಬೀಳುತ್ತಲ್ಲಾ” ಎಂದು ಆಲಿವರನಿಗೆ ಆ ಮನೆಯಾಕೆ ರೊಟ್ಟಿ ಬೆಣ್ಣೆ ಕೊಟ್ಟು ಕಳುಹಿಸಿದಳು.

ಒಂದು ಕೈಯಲ್ಲಿ ರೊಟ್ಟಿಯ ಚೂರು, ಇನ್ನೊಂದು ಕೈಯಲ್ಲಿ ತನ್ನ ಹರಕು ಟೋಪಿ ಹಿಡಿದುಕೊಂಡು ಆಲಿವರ್ ಆ ಮನೆಯನ್ನು ಬಿಟ್ಟು

ಹೊರಡಲು ಸಿದ್ಧನಾದ. ಆ ಮನೆಯಲ್ಲಿ ತಾನು ಕಳೆದ ಒಂಬತ್ತು ವರ್ಷ ಗಳಲ್ಲಿ ಒಂದು ದಿನವಾದರೂ ಒಂದು ಒಳ್ಳೆಯ ಮಾತು, ಒಂದು ಸಣ್ಣ ನಗು ಯಾವುದನ್ನೂ ಅವನು ಕಂಡಿರಲಿಲ್ಲ. "ಈ ಮನೆಯನ್ನು ಬಿಟ್ಟು ಹೋದರೆ ಸಾಕು" ಎನ್ನಿಸಿಬಿಟ್ಟಿತ್ತು. ಆದರೂ ಬಂಬಲ್ ತನ್ನ ಜೊತೆಯಲ್ಲಿ ಕರೆದುಕೊಂಡು, ಆ ಮನೆಯಿಂದ ಹೊರಟು, ತೋಟದ ಬಾಗಿಲನ್ನು ದಾಟಿದಾಗ, ಏಕೋ ಏನೋ, ಆಲಿವರ್ ತಡೆಯಲಾರದೆ ಗಳಗಳನೆ ಅತ್ತುಬಿಟ್ಟ.

ದಾರಿಯಲ್ಲಿ ಹೋಗುತ್ತಾ, ತಾನು ಆ ಮನೆಯಲ್ಲಿ ಬಿಟ್ಟುಬಂದ ಸ್ನೇಹಿತರನ್ನು ಆಲಿವರ್ ಜ್ಞಾಪಿಸಿಕೊಂಡ. ಅವರೂ ತನ್ನಂತೆಯೇ ತಬ್ಬಲಿಗಳು, ಅವರೂ ತನ್ನಂತೆಯೇ ದಟ್ಟದರಿದ್ರರು. ಆದರೂ ಅವರೇ ತನ್ನ ಪಾಲಿಗೆ ಎಲ್ಲಾ ಸರ್ವಸ್ವವಾಗಿದ್ದವರು. ಅವರ ಜೊತೆಯಲ್ಲಿ ಹಿಂದೆ ತಾನು ಇದ್ದುದನ್ನೂ, ಈಗ ಅವರನ್ನು ಬಿಟ್ಟು ತಾನು ಒಂಟಿಯಾದುದನ್ನೂ ಜ್ಞಾಪಿಸಿಕೊಂಡು ಆಲಿವರನಿಗೆ ಎದೆ ಒಡೆದಂತಾಯಿತು.

ಬಂಬಲ್ ಮಹಾಶಯ ದಾಟುಗಾಲು ಹಾಕುತ್ತ ಬೇಗಬೇಗ ಹೋದ. ಪುಟ್ಟ ಆಲಿವರ್ ಅವನ ಅಂಗಿಯ ತೋಳು ಹಿಡಿದುಕೊಂಡು ಅವನ ಹಿಂದೆ ಗುಡುಗುಡನೆ ಓಡಿದ. ಹತ್ತುಹತ್ತು ಹೆಜ್ಜೆಗೂ "ಸಿಕ್ಕಿತೆ? ಮನೆ ಸಿಕ್ಕಿತೆ?" ಎಂದು ಕೇಳುತ್ತ ಬಂಬಲನ ಹಿಂದೆಯೇ ಹೋದ.

ಅಂತೂ ಇಂತೂ ಹಾಗೂ ಹೀಗೂ ಆಲಿವರ್ ಬಂಬಲನ ಹಿಂದೆ ಅನಾಥಾಲಯವನ್ನು ಸೇರಿದ. ಅಲ್ಲಿ ಬಂಬಲ್ ಅವನನ್ನು ಒಬ್ಬ ಮುದುಕಿಯ ವಶಕ್ಕೆ ಒಪ್ಪಿಸಿ, ತಾನು ಒಳಕ್ಕೆ ಹೋದ. ಸ್ವಲ್ಪ ಹೊತ್ತಿನಲ್ಲೆ ಹಿಂದಿರುಗಿ ಬಂದು, "ಈ ದಿವಸ ರಾತ್ರೆ ಅನಾಥಾಲಯದ ಧರ್ಮದರ್ಶಿಗಳ ಸಭೆ ಸೇರುತ್ತದೆ. ನೀನು ಆ ಸಭೆಯ ಮುಂದೆ ಬಂದು ನಿಲ್ಲಬೇಕು" ಎಂದ.

ಪಾಪ, ಆಲಿವರನಿಗೆ ಸಭೆ ಎಂದರೇನು, ಧರ್ಮದರ್ಶಿ ಎಂದರೇನು

ಒಂದೂ ಗೊತ್ತಾಗಲಿಲ್ಲ. ಅಳಬೇಕೋ ನಗಬೇಕೋ ಏನೂ ತೋಚದೆ ಅವನು ಸುಮ್ಮನೆ ನಿಂತುಬಿಟ್ಟ.

ಹಾಗೆ ಅವನು ಸ್ತಬ್ಧನಾಗಿ ನಿಂತದ್ದನ್ನು ಕಂಡು, ಬಂಬಲ್ ತನ್ನ ಕೈಯಲ್ಲಿದ್ದ ಬೆಳ್ಳಿಯ ಕಟ್ಟಿನ ಕೋಲಿನಿಂದ ಅವನ ತಲೆಯ ಮೇಲೆ ಒಂದು ಕುಟ್ಟಿದ. ಕುಟ್ಟಿದೊಡನೆ ಆಲಿವರನಿಗೆ ಎಚ್ಚರವಾಯಿತು. ಹಾಗೆಯೇ ಎರಡನೆಯ ಸಲ ಕುಟ್ಟಿದಾಗ ಆಲಿವರ್ ಬೆಚ್ಚಿ ಅವನ ಮುಖ ನೋಡಿದ.

"ನನ್ನ ಹಿಂದೆ ಬಾ" ಎಂದು ಬಂಬಲ್ ಸಂಜ್ಞೆ ಮಾಡಿದ. ಆಲಿವರ್ ಕಣ್ಣೀರನ್ನು ಹಾಗೇ ಕಣ್ಣಲ್ಲಿಯೇ ನುಂಗಿಕೊಂಡು ಅವನ ಹಿಂದೆ ಹೋದ.

ಒಳಗೆ ಒಂದು ದೊಡ್ಡ ಕೊಠಡಿಯಲ್ಲಿ ಧರ್ಮದರ್ಶಿಗಳ ಸಭೆ ಸೇರಿತ್ತು. ಅಲ್ಲಿ ಒಂದು ಮೇಜಿನ ಸುತ್ತ ಎಂಟು ಹತ್ತು ಜನ ಕುಳಿತಿದ್ದರು. ಒಬ್ಬೊಬ್ಬರಿಗೂ ಬೊಜ್ಜು ಮಿತಿಮೀರಿ ಬೆಳೆದಿತ್ತು.

ಆಲಿವರ್ ಅದುವರೆಗೆ ಅಷ್ಟು ಜನರನ್ನು ಒಟ್ಟಿಗೆ ಎಂದೂ ನೋಡಿರಲಿಲ್ಲ. ಈಗ ನೋಡಿದೊಡನೆ ಭಯದಿಂದ ನಡುಗುತ್ತ ನಿಂತ.

ಬಂಬಲ್ ತನ್ನ ಕೋಲಿನಿಂದ ಅವನನ್ನು ತಿವಿಯುತ್ತ "ಸಭೆಗೆ ನಮಸ್ಕಾರ ಮಾಡು" ಎಂದ. ಆಲಿವರನ ಕಣ್ಣಲ್ಲಿ ನೀರು ಚಿಮ್ಮಿತು. ಆದರೆ ಅದನ್ನು ಹಾಗೇ ಅಂಗಿಯ ತೋಳಿಂದ ಒರಸಿಕೊಂಡು ಸುತ್ತಲೂ ನೋಡಿದ. ಸಭೆ ಯಾವುದೂ ಕಾಣಿಸಲಿಲ್ಲ. ನಿಧಾನ ಮಾಡಿದರೆ ಬಂಬಲನ ಕೋಲಿನ ರುಚಿ ನೋಡಬೇಕಾದೀತೆಂದು ಅಂಜಿ, ಆಲಿವರ್ ಎದುರಿಗಿದ್ದ ಮೇಜಿಗೇ ನಮಸ್ಕಾರ ಮಾಡಿದ. ಅವನ ಅದೃಷ್ಟ ಚೆನ್ನಾಗಿತ್ತು; ಮೇಜಿನ ಸುತ್ತಲೂ ಕುಳಿತಿದ್ದ ಬೊಜ್ಜರು ಆಲಿವರ್ ತಮಗೆ ನಮಸ್ಕಾರ ಮಾಡಿದನೆಂದು ತಿಳಿದುಕೊಂಡರು. ಬಂಬಲ್ ತಾನೂ ಹಾಗೇ ಎಂದುಕೊಂಡ.

"ನಿನ್ನ ಹೆಸರೇನೋ, ಹುಡುಗ?" ಎಂದು ಒಬ್ಬ ಬೊಜ್ಜ ಕೇಳಿದ.

ಅವನ ಧ್ವನಿ ಕೇಳಿ ಆಲಿವರ್ ಬೆದರಿದ, ಬೆವರಿದ. ಬಂಬಲ್ ಪುನಃ ತನ್ನ ಕೋಲಿನಿಂದ ಆಲಿವರನ ಬೆನ್ನಿಗೆ ತಿವಿದ. ಆಲಿವರನಿಗೆ ಅಳು ಬಂತು. ಹೆದರಿಕೆಯೊಂದು ಕಡೆ, ಅಳು ಒಂದು ಕಡೆ; ಅದರಿಂದಾಗಿ ಆಲಿವರ್ ಮಾತನಾಡಿದ್ದು ಸ್ಪಷ್ಟವಾಗಿರಲಿಲ್ಲ.

"ಅಳಬೇಡ. ಹೆದರದೆ ಗಟ್ಟಿಯಾಗಿ ಹೇಳು" ಎಂದು ಆ ಬೊಜ್ಜ ಕೂಗಿದ. ಬಂಬಲ್ ಚುಚ್ಚಿದ. ಆಲಿವರನ ಅಳು ಮಾತ್ರ ನಿಲ್ಲಲಿಲ್ಲ, ಹೆದರಿಕೆ ಹೋಗಲಿಲ್ಲ.

ಪುನಃ ಆ ಬೊಜ್ಜ "ಏ ಹುಡುಗ! ನೀನು ತಬ್ಬಲಿ ಎಂಬುದು ನಿನಗೆ ಗೊತ್ತೊ?" ಎಂದು ಕೇಳಿದ.

ಪಾಪ, ಆಲಿವರ್, ಅರ್ಥವಾಗದೆ "ಹಾಗೆಂದರೆ ಏನು, ಸ್ವಾಮಿ?" ಎಂದು ಕೇಳಿದ.

"ಇದೇನು ಈ ಹುಡುಗ ಹೀಗೆ! ಸ್ವಲ್ಪವಾದರೂ ಬುದ್ಧಿಯಿಲ್ಲ. ಏನು ಹೇಳಿದರೂ ತಿಳಿಯುವುದಿಲ್ಲ" ಎಂದು ಇನ್ನೊಬ್ಬ ಬೊಜ್ಜ ಗದರಿಸಿದ.

ಅದಕ್ಕೆ ಮೊದಲು ಮಾತನಾಡಿದವನು "ಇರಲಿ, ಇರಲಿ" ಎಂದು ಅವನನ್ನು ತಡೆದು, "ಏ ಹುಡುಗ, ನಿನಗೆ ತಾಯಿ ಇಲ್ಲ, ತಂದೆಯಿಲ್ಲ. ಅನಾಥಾಲಯದವರೇ ನಿನ್ನನ್ನು ಬೆಳೆಸಿ ಮುಂದಕ್ಕೆ ತಂದರು. ಅಲ್ಲವೆ?" ಎಂದು ಪ್ರಶ್ನಿಸಿದ.

"ಹೌದು, ಸ್ವಾಮಿ" ಎಂದು ಹೇಳಿ ಆಲಿವರ್ ಗಳಗಳನೆ ಬಿಕ್ಕಿಬಿಕ್ಕಿ ಅಳತೊಡಗಿದ.

ಮೇಜಿನ ಸುತ್ತ ಕುಳಿತಿದ್ದ ಒಬ್ಬಿಬ್ಬರು "ಇದೇನಿದು ವಿಚಿತ್ರ! ಏನು ಮಾತನಾಡಿಸಿದರೂ ಸುಮ್ಮಗೆ ಹೀಗೆ ಅಳುತ್ತಾನೆ" ಎಂದರು.

ಅಷ್ಟರಲ್ಲಿ ಇನ್ನೊಬ್ಬ "ಪ್ರತಿದಿನವೂ ದೇವರ ಸ್ತೋತ್ರ ಪ್ರಾರ್ಥನೆ ಸರಿಯಾಗಿ ಹೇಳುತ್ತೀಯೆ ತಾನೆ?" ಎಂದ.

ಅವನು ಏನು ಪ್ರಶ್ನೆ ಕೇಳಿದನೆಂಬುದು ತನಗೆ ಅರ್ಥವಾಗದಿದ್ದರೂ ಹೌದೆಂದು ಉತ್ತರ ಹೇಳುವುದೇ ಒಳ್ಳೆಯದೆಂದು ಆಲಿವರ್ ಒಣಗಿಹೋದ ತುಟಿಗಳನ್ನು ನಾಲಗೆಯಿಂದ ಸವರಿಕೊಳ್ಳುತ್ತ "ಹೌದು, ಸ್ವಾಮಿ" ಎಂದ.

"ಸರಿ, ಒಳ್ಳೆಯದು. ಇಲ್ಲಿ ನಿನಗೆ ವಿದ್ಯಾಭ್ಯಾಸ ಮಾಡಿಸಿ, ಜೀವನೋಪಾಯಕ್ಕೆ ಬೇಕಾದ ಯಾವುದಾದರೂ ಕೆಲಸವನ್ನು ಕಲಿಸಿ ಕೊಡುತ್ತೇವೆ" ಎಂದು ಒಬ್ಬ ಗೊಣಗಿದ.

ಸರಿ. ಸಭೆ ಮುಗಿಯಿತೆಂದು ಬಂಬಲಿನ ಕೋಲು ಆಲಿವರನ ಬೆನ್ನಿಗೆ ಸೂಚನೆ ಮಾಡಿತು. ಎಲ್ಲಿಂದಲೋ ಒಬ್ಬ ಧಾಂಡಿಗ ಬಂದು, ಆಲಿವರನ ಕೈಹಿಡಿದು ಒಳಕ್ಕೆ ಎಳೆದುಕೊಂಡು ಹೋದ.

ಒಳಗೆ ಅವನಂತೆಯೇ ಇನ್ನೂ ಅನೇಕರು ಹುಡುಗರು. ಅವರು ಮಲಗುವುದಕ್ಕೆ ನೆಲದ ಮೇಲೆ ಒರಟಾದ ಹಾಸಿಗೆ. ಅಲ್ಲೇ ಅದರ ಮೇಲೆಯೇ ಆಲಿವರ್ ಬಿದ್ದುಕೊಂಡ. ಸೀನೇ ಎಂದು ಮಾತನಾಡಿಸುವವರಿಲ್ಲದೆ ಬಿಕ್ಕಿಬಿಕ್ಕಿ ಅಳುತ್ತ, ಹಾಗೆಯೇ ನಿದ್ರೆಹೋದ.

## ಆಲಿವರ್ ಇನ್ನಷ್ಟು ಕೇಳಿದ

ಆಲಿವರ್ ಬಂದು ಸೇರಿದ ಅನಾಥಾಲಯದಲ್ಲಿ ಇದ್ದ ಹುಡುಗರಿಗೆಲ್ಲಾ ಅಡುಗೆಯ ಮನೆಯಲ್ಲಿಯೇ ಊಟಕ್ಕೆ ಬಡಿಸುತ್ತಿದ್ದರು. ಅಥವಾ ಆ ಹುಡುಗರ ಊಟದ ಮನೆಯಲ್ಲಿಯೇ ಅಡಿಗೆ ಮಾಡುತ್ತಿದ್ದರು ಎಂದೆನ್ನಬಹುದು. ಅಲ್ಲಿಯೇ ಒಂದು ಮೂಲೆಯಲ್ಲಿ ಒಂದು ದೊಡ್ಡ ಹಂಡೆ. ಊಟದ ವೇಳೆಯಲ್ಲಿ ಅದರಲ್ಲೇ ಗಂಜಿ ಕಾಯಿಸುತ್ತಿದ್ದರು. ಅಡುಗೆಯವನೂ ಅವನ ಜೊತೆಗೆ ಇಬ್ಬರು ಹೆಂಗಸರೂ ಆ ಗಂಜಿಯನ್ನು ಹುಡುಗರಿಗೆ ಬಡಿಸುತ್ತಿದ್ದರು.

ಪ್ರತಿಯೊಬ್ಬ ಹುಡುಗನಿಗೂ ಒಂದೊಂದು ಬಟ್ಟಲು, ಒಂದೊಂದು ಚಮಚ. ಒಂದೊಂದು ಬಟ್ಟಲಿಗೂ ಒಂದೊಂದೇ ಸವುಟು ಗಂಜಿ.

ಎಂದಾದರೂ ಹಬ್ಬ ಹುಣ್ಣಿಮೆ ಎಂದಾದರೆ ಒಂದು ಚೂರು ರೊಟ್ಟಿ. ಇಷ್ಟೇ ಆ ಮಕ್ಕಳ ಆಹಾರ. ಇದನ್ನು ತಿಂದು ತಿಂದು ಅವರು ಕೊಬ್ಬಿ ಬೆಳೆಯಬೇಕು.

ಊಟ ಮುಗಿದ ಮೇಲೆ ಅವರು ಕೈಗಳನ್ನೂ ತೊಳೆಯಬೇಕಾಗಿರಲಿಲ್ಲ, ಬಟ್ಟಲುಗಳನ್ನೂ ತೊಳೆಯಬೇಕಾಗಿರಲಿಲ್ಲ. ಚಮಚದಿಂದ ಕೆರೆದೂ ಕೆರೆದೂ ಬಟ್ಟಲುಗಳಂತೂ ಫಳಫಳನೆ ಮಿರುಗುತ್ತಿದ್ದುವು. ಹಾಕಿದ ಒಂದು ಸವುಟು ಗಂಜಿಯನ್ನೂ ಒಂದೇ ಗುಟುಕಿಗೆ ಕುಡಿದುಬಿಟ್ಟು, ಆ ಹುಡುಗರೆಲ್ಲರೂ ಹಂಡೆಯನ್ನೇ ನೋಡುತ್ತ ಕುಳಿತುಕೊಳ್ಳುವರು. ಸಾಧ್ಯವಾದರೆ ಇಡೀ ಹಂಡೆಯನ್ನೇ, ಸಾಧ್ಯವಾದರೆ ಒಲೆಯ ಇಟ್ಟಿಗೆಗಳನ್ನೇ ಕಣ್ಣಿನಿಂದ ತಿಂದುಬಿಡುವಂತೆ ನೋಡುವರು. ಚಮಚಗಳನ್ನು ನೆಕ್ಕುವರು. ಚಮಚಗಳನ್ನು ಹಿಡಿದ ಕೈಬೆರಳುಗಳನ್ನು ಚೀಪುವರು. ಎಲ್ಲಿಯಾದರೂ ಒಂದು ಹನಿ ಗಂಜಿ ಸಿಡಿದುಹೋಗಿದೆಯೋ ಎಂದು ಮೇಜಿನ ಮೇಲೆಲ್ಲ ಹುಡುಕುವರು.

ಹುಡುಗರ ಹೊಟ್ಟೆಗೆ ಹನಿ ಗಂಜಿ ಸಾಕಾದೀತೆ! ಅವರೂ ಬೆಳೆಯುವ ಹುಡುಗರು! ಆದರೇನು ಮಾಡಿಯಾರು! ಹೀಗೇ ಕೆಲವು ತಿಂಗಳು ಕಳೆಯಿತು.

ಒಂದು ದಿನ ಅವರಲ್ಲಿ ಒಬ್ಬ ಹುಡುಗ "ಈ ಹಸಿವನ್ನು ನಾನು ತಡೆಯಲಾರೆನಪ್ಪ. ಹೀಗೇ ಹೊಟ್ಟೆಗಿಲ್ಲದೆ ಇದ್ದರೆ, ನಾನು ಯಾವ ಹೊತ್ತಾದರೂ ಒಂದು ರಾತ್ರೆ ನನ್ನ ಪಕ್ಕದಲ್ಲಿ ಮಲಗಿರುವವನನ್ನೇ ತಿಂದು ಹಾಕಿಬಿಡುತ್ತೇನೆ. ಈ ಮಾತು ಖಂಡಿತ" ಎಂದ.

ಅವನ ಮಾತು ಕೇಳಿದವರು ಅವನ ಮುಖವನ್ನೂ ಕಣ್ಣುಗಳನ್ನೂ ನೋಡಿ, "ಇವನು ಹಾಗೆ ಮಾಡಿದರೂ ಏನೂ ಆಶ್ಚರ್ಯವಿಲ್ಲ" ಎಂದುಕೊಂಡು, "ಇದಕ್ಕೆ ಏನು ಉಪಾಯ ಮಾಡೋಣ? ಹೊಟ್ಟೆ ತುಂಬ ಗಂಜಿಯನ್ನು ಹೇಗೆ ಸಂಪಾದಿಸೋಣ?" ಎಂದು ಮಾತನಾಡಿಕೊಂಡರು.

ಕೊನೆಗೆ "ಈದಿನ ಸಂಜೆ ಎಂದಿನ ಹಾಗೆಯೇ ಗಂಜಿ ಬಡಿಸಿ ಆದ ಮೇಲೆ, ಯಾರಾದರೂ ಒಬ್ಬರು ಎದ್ದು ಅಡುಗೆಯವನ ಹತ್ತಿರ ಹೋಗಿ, ಇನ್ನಷ್ಟು ಗಂಜಿ ಕೇಳಬೇಕು" ಎಂದು ತೀರ್ಮಾನಿಸಿದರು.

ಆದರೆ, ಯಾರು ಹೋಗಿ ಕೇಳಬೇಕು? ಯಾರಿಗೂ ಕೇಳುವುದಕ್ಕೆ ಧೈರ್ಯವಿಲ್ಲ. ಕೊನೆಗೆ, ಯಾರು ಕೇಳಬೇಕೆಂಬುದನ್ನು ನಿರ್ಧರಿಸಲು ಚೀಟಿ ಹಾಕಿದರು. ಚೀಟಿ ಆಲಿವರನ ಪಾಲಿಗೆ ಬಂತು.

ಸಂಜೆಯಾಯಿತು. ಹುಡುಗರು ಎಂದಿನಂತೆಯೇ ಊಟಕ್ಕೆ ಕುಳಿತರು. ಅಡುಗೆಯವನು ಗಂಜಿಯ ಹಂಡೆಯ ಹತ್ತಿರ ನಡುವಿನ ಮೇಲೆ ಕೈಯೂರಿಕೊಂಡು ನಿಂತ. ಅವನ ಸಹಾಯಕರಿಬ್ಬರೂ ಸವುಟು ತೆಗೆದುಕೊಂಡು ಎಂದಿನ ಹಾಗೆ ಒಂದೊಂದು ಬಟ್ಟಲಿಗೆ ಒಂದೊಂದು ಸವುಟು ಗಂಜಿ ಬಡಿಸಿದರು.

ಕೊನೆಯ ಸಾಲಿಗೆ ಬಡಿಸುವುದರೊಳಗಾಗಿ ಇತರ ಸಾಲಿಗೆ ಬಡಿಸಿದ್ದದ್ದು ಮುಗಿದುಹೋಯಿತು. ಬಡಿಸಿದೊಡನೆಯೆ ಕೊನೆಯ ಸಾಲಿನವರೂ ತಮ್ಮ ಗಂಜಿಯನ್ನು ಮುಗಿಸಿಬಿಟ್ಟರು. ಹುಡುಗರು ಒಬ್ಬರೊಬ್ಬರ ಮುಖ ನೋಡಿಕೊಂಡು ಪಿಸುಗುಟ್ಟಿದರು. ಕಡೆಗೆ ಎಲ್ಲರೂ ಆಲಿವರನ ಕಡೆ ತಿರುಗಿ ಕಣ್ಣು ಚಿವುಟಿದರು. ಆಲಿವರನ ಪಕ್ಕದ ಹುಡುಗ ಅವನನ್ನು 'ಹೋಗು' ಎಂದು ತಿವಿದ.

ಆಲಿವರನಿಗೋ ಮೊದಲೇ ಹಸಿವೆ. ಜೊತೆಗೆ ಸ್ನೇಹಿತರ ಒತ್ತಾಯ. 'ಮಹಾ, ಏನು ಮಾಡುತ್ತಾರೆ!' ಎಂದು ಏನೋ ಒಂದು ಮೊಂಡು ಧೈರ್ಯ. ಅಂತೂ ಹಾಗೂ ಹೀಗೂ ತನ್ನ ಭಯವನ್ನು ಅಡಗಿಸಿಕೊಂಡು, ಮೆಲ್ಲನೆ ಎದ್ದು, ತನ್ನ ಬಟ್ಟಲನ್ನು ಹಿಡಿದುಕೊಂಡು ಅಡುಗೆಯವನ ಹತ್ತಿರ ಹೋದ.

ಹುಡುಗರೆಲ್ಲರೂ ಕಣ್ಣುಬಾಯಿ ಬಿಟ್ಟುಕೊಂಡು ಅವನನ್ನೇ ನೋಡುತ್ತಿದ್ದರು. ಅಡುಗೆಯವನಂತೂ ಬೆಕ್ಕಸಬೆರಗಾಗಿ "ಇದೇನಿದು? ಎಂದೂ

ಕಾಣದ ಅದ್ಭುತ? ಇದೇಕೆ ಈ ಹುಡುಗ ಹೀಗೆ ಎದ್ದು ಬರುತ್ತಿದ್ದಾನೆ?" ಎಂದುಕೊಂಡ.

ಊಟದ ಮನೆಯೆಲ್ಲ ನಿಶ್ಶಬ್ದವಾಗಿತ್ತು. ತನ್ನ ದಿಟ್ಟತನಕ್ಕೆ ಆಲಿವರ್ ತಾನೇ ದಿಗಿಲುಗೊಂಡ. ಆದರೂ ಹಾಗೇ ತೊದಲುತ್ತ "ನನಗೆ ಇನ್ನಷ್ಟು ಗಂಜಿ ಬೇಕು" ಎಂದ.



"ನನಗೆ ಇನ್ನಷ್ಟು ಬೇಕು"

ಅಡುಗೆಯವನು ಉಸಿರಾಡಲಾರದೆ ಬಾಯಿಬಾಯಿಬಿಟ್ಟ. ತನ್ನ ಕಿವಿಯನ್ನೇ ನಂಬಲಾರದೆ ಕಣ್ಣುಕಣ್ಣುಬಿಟ್ಟ. ಚಳಿ ಬಂದವನ ಹಾಗೆ

ಗಡಗಡ ನಡುಗಿದ. ಅವನ ಮುಖದಲ್ಲಿನ ರಕ್ತವೆಲ್ಲಾ ಇಂಗಿಹೋಯಿತು. ಒಂದೆರಡು ನಿಮಿಷ ಆಲಿವರನನ್ನು ದುರದುರನೆ ನೋಡಿದ. ಅವನ ಕಾಲುಗಳು ತತ್ತರಿಸಿದುವು. ಬೀಳುವ ಹಾಗಾಯಿತು. ಹಾಗೇ ಗಂಜಿಯ ಹಂಡೆಯುನ್ನು ಒರಗಿಕೊಂಡು ನಿಂತ.

ಕಟ್ಟಕಡೆಗೆ ಸ್ವಲ್ಪಸ್ವಲ್ಪವಾಗಿ ಚೇತರಿಸಿಕೊಂಡು ಕುಗ್ಗಿದ ಧ್ವನಿಯಲ್ಲಿ "ಏನು ?" ಎಂದ.

"ನನಗೆ ಇನ್ನಷ್ಟು ಗಂಜಿ ಬೇಕು" ಎಂದು ಆಲಿವರ್ ಹೇಳಿದ.

ಅಡುಗೆಯವನು ದೊಡ್ಡ ಸವುಟನ್ನು ಎತ್ತಿ ಆಲಿವರನ ತಲೆಗೆ ಒಂದು ಬಿಗಿದ. ಅವನ ಮೇಲೆ ನುಗ್ಗಿ ಅವನ ಕೈಗಳನ್ನು ಬಿಗಿಯಾಗಿ ಹಿಡಿದು, ಬಂಬಲ್ ಮಹಾಶಯನನ್ನು ಬರಬೇಕೆಂದು ಕೂಗಿಕೊಂಡ.

ಬಂಬಲ್ ಓಡಿಬಂದ. ಆಲಿವರ್ ಮಾಡಿದ ಮಹಾ ಅಪರಾಧವನ್ನು ಕೇಳಿ ಸ್ತಂಭಿತನಾದ. ಅನಾಥಾಲಯದ ಚರಿತ್ರೆಯಲ್ಲೇ ಅದುವರೆಗೆ ಕೇಳದಿದ್ದಂತಹ ಸಂಗತಿ ನಡೆದುದನ್ನು ಧರ್ಮದರ್ಶಿಗಳಿಗೆ ತಿಳಿಸಬೇಕೆಂದು ಓಡಿದ.

ಅದೇ ವೇಳೆಯಲ್ಲಿ ಧರ್ಮದರ್ಶಿಗಳು ಅಲ್ಲೇ ಸಭೆ ಸೇರಿದ್ದರು. ಅಲ್ಲಿಗೆ ಬಂಬಲ್ ಮೇಲುಸಿರು ಬಿಡುತ್ತ ಓಡಿಬಂದ.

"ಸ್ವಾಮಿ, ಸ್ವಾಮಿ, ಆಲಿವರ್ ಟ್ವಿಸ್ಟ್ ಇನ್ನಷ್ಟು ಕೇಳಿದನಂತೆ" ಎಂದ.

ಸಭೆಯಲ್ಲಿ ಕುಳಿತಿದ್ದವರೆಲ್ಲರೂ ಬೆಚ್ಚಿಬಿದ್ದು, "ಇನ್ನಷ್ಟೆ?", "ಇನ್ನಷ್ಟೆ?" "ಇನ್ನಷ್ಟೆ?" ಎಂದು ಎಲ್ಲರೂ ಕೇಳುವವರೆ. ಆಕಾಶವೇ ಒಂದು ವೇಳೆ ತಲೆಯ ಮೇಲೆ ಕಳಚಿಕೊಂಡು ಬಿದ್ದಿದ್ದರೂ ಅವರಿಗೆ ಅಷ್ಟು ಆಶ್ಚರ್ಯವಾಗುತ್ತಿರಲಿಲ್ಲ, ಅಷ್ಟು ದಿಗಿಲಾಗುತ್ತಿರಲಿಲ್ಲ.

ಕಡೆಗೆ ಧರ್ಮದರ್ಶಿಗಳಲ್ಲಿ ಹಿರಿಯನಾದವನೊಬ್ಬನು "ಏನೆಂದೆ,

ಬಂಬಲ್? ಇನ್ನಷ್ಟೆ? ಇನ್ನಷ್ಟು ಬೇಕೆಂದು ಕೇಳಿದನೆ? ಏನದು, ಇನ್ನೊಮ್ಮೆ ನಿಧಾನವಾಗಿ ಹೇಳು" ಎಂದನು.

"ಹೌದು, ಸ್ವಾಮಿ. ಆಲಿವರ್ ಟ್ವಿಸ್ಟ್ 'ಇನ್ನಷ್ಟು ಗಂಜಿ ಬೇಕು' ಎಂದು ಕೇಳಿದನು" ಎಂದು ಬಂಬಲ್ ಹೇಳಿದ.

"ಹೀಗಾದರೆ ಆ ಹುಡುಗ ಖಂಡಿತ ಹಾಳಾಗಿ ಹೋಗುತ್ತಾನೆ. ಅವನು ಬೇರೆ ಉದ್ಧಾರವಾಗುವುದಿಲ್ಲ" ಎಂದು ಇನ್ನೊಬ್ಬ ಧರ್ಮದರ್ಶಿಯೆಂದ.

"ಸರಿ. ಆಲಿವರನನ್ನು ಈ ಕೂಡಲೇ ನೆಲಮಾಳಿಗೆಯಲ್ಲಿ ತಳ್ಳಿ ಬೀಗ ಹಾಕು. ಇದೇ ಕ್ಷಣವೇ 'ಈ ಆಲಿವರನನ್ನು ಅನಾಥಾಲಯದಿಂದ ಕರೆದುಕೊಂಡು ಹೋಗಿ ಕೂಲಿಗೆ ನೇಮಿಸಿಕೊಳ್ಳುವವರಿಗೆ ಐದು ಪೌಂಡು ಬಹುಮಾನವನ್ನು ಕೊಡುತ್ತೇವೆ' ಎಂದು ಒಂದು ತಿಳಿವಳಿಕೆಯ ಚೀಟಿಯನ್ನು ಅನಾಥಾಲಯದ ಬಾಗಿಲಿಗೆ ಹಚ್ಚಿಸು" ಎಂದು ಸಭೆ ಬಂಬಲ್‌ಗೆ ಅಪ್ಪಣೆ ಮಾಡಿತು.

## "ಆಲಿವರ್ ಬೇಕೇ ಆಲಿವರ್!"

ಒಂದು ವಾರವಾಯಿತು. ಆಲಿವರನನ್ನು ಇನ್ನೂ ನೆಲಮಾಳಿಗೆಯಲ್ಲೇ ಕೂಡಿಹಾಕಿದ್ದರು. ಆ ನೆಲಮಾಳಿಗೆಯಲ್ಲೋ ಕತ್ತಲೆ ಎಂದರೆ ಕತ್ತಲೆ. ಗಾಳಿಯಿಲ್ಲ, ಬೆಳಕಿಲ್ಲ. ತುಂಬ ಧೂಳು, ಚಳಿಯ ಕೊರೆತ. ಜೊತೆಗೆ ಯಾರೂ ಇಲ್ಲ.

ಆಲಿವರ್ ಹಗಲೆಲ್ಲಾ ಬಿಕ್ಕಿಬಿಕ್ಕಿ ಅಳುವನು. ರಾತ್ರಿಯಾದೊಡನೆ ಆ ಕತ್ತಲೆಗೂ ಆ ನಿಶ್ಶಬ್ದತೆಗೂ ಹೆದರಿ ನಡುಗುವನು. ತನ್ನ ಚಿಕ್ಕ ಕೈಗಳಿಂದ ಕಣ್ಣು ಮುಚ್ಚಿಕೊಂಡು, ಮೂಲೆಯಲ್ಲಿ ಮುದುರಿಕೊಂಡು ನಿದ್ರೆ ಮಾಡಲು ಪ್ರಯತ್ನಿಸುವನು. ಗಳಿಗೆಗೆ ಒಂದು ಸಲ ಬೆಚ್ಚಿಬೀಳುವನು.

ಯಾವುದೋ ಭಯದಿಂದ ದೂರವಾಗುವ ಹಾಗೆ ಗೋಡೆಗೆ ಅಂಟಿಕೊಂಡು ಅಡಗಿಕೊಳ್ಳುವನು.

ದಿನ ಬಿಟ್ಟು ದಿನ ಅವನನ್ನು ನೆಲಮಾಳಿಗೆಯಿಂದ ಮೇಲಕ್ಕೆ ಕರೆದು ಕೊಂಡು ಹೋಗುವರು. ಅಲ್ಲಿ, ಹುಡುಗರೆಲ್ಲರೂ ಊಟಕ್ಕೆ ಕುಳಿತು ಕೊಂಡಾಗ, "ನೀವು ಯಾರಾದರೂ ಇನ್ನಷ್ಟು ಎಂದು ಕೇಳಿದರೆ ನಿಮಗೂ ಹೀಗೇ ಆಗುತ್ತದೆ" ಎಂದು ಹೆದರಿಸುವುದಕ್ಕಾಗಿ, ಎಲ್ಲರ ಎದುರಿಗೂ ಆಲಿವರನಿಗೆ ಛಡಿಯೇಟು ಬೀಳುತ್ತಿತ್ತು.

ಹೀಗೇ ಒಂದು ವಾರ ಕಳೆದ ಮೇಲೆ ಒಂದುದಿನ ಒಬ್ಬ ಮಸಿ ಗುಡಿಸು ವವನು ಆ ಅನಾಥಾಲಯದ ಬೀದಿಯಲ್ಲಿ ಹೋಗುತ್ತಿದ್ದಾಗ ಅಲ್ಲಿನ ಬಾಗಿಲ ಮೇಲೆ ಅಂಟಿಸಿದ್ದ ತಿಳಿವಳಿಕೆಯ ಚೀಟಿ ಅವನ ಕಣ್ಣಿಗೆ ಬಿತ್ತು. ಯಾರ ಮನೆಯಲ್ಲಾದರೂ ಹೊಗೆ ಹೋಗುವ ಕೊಳವೆಯಲ್ಲಿ ಮಸಿ ಕಟ್ಟಿ ಕೊಂಡಿದ್ದರೆ ಅದನ್ನು ಅವನು ಗುಡಿಸಿ ಸ್ವಚ್ಛಮಾಡುತ್ತಿದ್ದ. ಅವನಿಗೆ ಕೆಲಸ ತುಂಬ ಹೆಚ್ಚಾಗಿತ್ತು. ಜೊತೆಗೆ ಯಾರಾದರೂ ಬೇಕಾಗಿತ್ತು. ಬಾಗಿಲ ಮೇಲಿನ ಚೀಟಿಯನ್ನು ನೋಡಿದ. ಅನಾಯಾಸವಾಗಿ ಒಬ್ಬ ಹುಡುಗ ಸಿಕ್ಕುವುದಾದರೆ, ಅವನ ಜೊತೆಗೆ ಐದು ಪೌಂಡು ಹಣ ದೊರಕು ವುದಾದರೆ, ಯಾರಿಗೆ ಬೇಡ?

"ಹೇಯ್!" ಎಂದು ಆ ಮಸಿ ಗುಡಿಸುವವನು ತನ್ನ ಕೆಲಸದ ಸಾಮಾನುಗಳನ್ನು ಹೊತ್ತುಕೊಂಡು ಹೋಗುತ್ತಿದ್ದ ಕತ್ತೆಯನ್ನು ಕರೆದ.

ಕತ್ತೆ ಎಷ್ಟಾದರೂ ಕತ್ತೆಯೇ. ಅದು ಅವನ ಮಾತು ಕೇಳು ತ್ತದೆಯೆ? ತನ್ನ ಪಾಡಿಗೆ ತಾನು ಮೊಂಡುಬಾಲ ಆಡಿಸಿಕೊಂಡು ಮುಂದೆ ಹೋಯಿತು.

ಮಸಿ ಗುಡಿಸುವವನು ಓಡಿಹೋಗಿ, ಕೈಲಿದ್ದ ದೊಣ್ಣೆಯಿಂದ ಅದರ ತಲೆಯ ಮೇಲೆ ಒಂದು ಏಟು ಕೊಟ್ಟ. ಕತ್ತೆಯಾಗುವ ಹೊತ್ತಿಗೆ ಆ

ಏಟನ್ನು ತಾಳಿಕೊಂಡಿತೇ ವಿನಾ ಬೇರೆ ಯಾವುದಾದರೂ ಪ್ರಾಣಿಯಾಗಿದ್ದಿದ್ದರೆ ಅದರ ತಲೆ ನೂರು ಹೋಳಾಗಿಬಿಡುತ್ತಿತ್ತು.

ಕತ್ತೆಯಾದರೇನಂತೆ? ಪಾಪ, ಏಟು ಬಿದ್ದರೆ ನೋಯುವುದಿಲ್ಲವೆ? ಏಟು ತಿಂದ ಕತ್ತೆ ಅಲ್ಲೇ ನಿಂತಿತು. ಮಸಿ ಗುಡಿಸುವವನು ಅದರ ಮೂಗುದಾರವನ್ನು ಹಿಡಿದು ಒಂದು ಸಲ ಜಗ್ಗಿ, "ನಾನು ಹೇಳಿದ ಹಾಗೆ ಕೇಳಬೇಕು. ಮರೆತೀಯೆ, ಗುಲಾಮ" ಎಂದ. ಕತ್ತೆ ತಲೆ ತಗ್ಗಿಸಿಕೊಂಡು, ಬಾಲ ಮುದುರಿಕೊಂಡು ಅವನು ಎಳೆದ ಕಡೆಗೆ ತಿರುಗಿತು. ಅವನು ಅದನ್ನು ಅನಾಥಾಲಯದ ಬಾಗಿಲಿಗೆ ಎಳೆದುಕೊಂಡು ಬಂದು, "ನಾನು ಹಿಂದಿರುಗಿ ಬರುವವರೆಗೂ ಇಲ್ಲಿ ಸತ್ತ ಹಾಗೆ ಬಿದ್ದಿರಬೇಕು" ಎಂದು ತಲೆಯ ಮೇಲೆ ಪುನಃ ಇನ್ನೊಂದು ಏಟು ಹೊಡೆದ. ಕತ್ತೆ ಸತ್ತ ಹಾಗೆಯೇ ನಿಂತುಕೊಂಡಿತು.

ಹೀಗೆ ಆ ಮಸಿ ಗುಡಿಸುವವನು ತನ್ನ ಕತ್ತೆಯನ್ನು ಎಷ್ಟು ವಿಶ್ವಾಸದಿಂದ ನಡೆಸಿಕೊಳ್ಳುತ್ತಿದ್ದನೆಂಬುದನ್ನು ಅನಾಥಾಲಯದ ಬಾಗಿಲಲ್ಲಿ ನಿಂತಿದ್ದ ಒಬ್ಬ ಧರ್ಮದರ್ಶಿ ಹಾಗೇ ನೋಡುತ್ತಿದ್ದ. "ಈ ಮೊಂಡು ಕತ್ತೆಯನ್ನು ಇಷ್ಟು ಚೆನ್ನಾಗಿ ಶಿಕ್ಷಿಸುವ ಇವನ ಕೈಗೆ ನಮ್ಮ ಆಲಿವರ್ ಸಿಕ್ಕಬೇಕು!" ಎಂದುಕೊಂಡ.

ಆ ವೇಳೆಗೆ ಆ ಮಸಿ ಗುಡಿಸುವವನು ಅವನ ಹತ್ತಿರ ಬಂದು, ತನ್ನ ಕೈಯ ಕೋಲಿನಿಂದ ಆ ತಿಳಿವಳಿಕೆಯ ಚೀಟಿಯನ್ನು ತಿವಿಯುತ್ತಾ, "ಈ ಚೀಟಿಯಲ್ಲಿ ಹೇಳಿರುವ ಹುಡುಗ......ಯಾರನ್ನೋ ಅನಾಥಾಲಯದವರು ಕೂಲಿಗೆ ಕಳಿಸುತ್ತಾರಂತೆ" ಎಂದ.

ಧರ್ಮದರ್ಶಿ ತನ್ನ ಡೊಳ್ಳುಹೊಟ್ಟೆ ಸವರಿಕೊಳ್ಳುತ್ತ, "ಹೌದು, ಹೌದು. ಏನಾಗಬೇಕು?" ಎಂದ.

"ಏನೂ ಇಲ್ಲ. ಹುಡುಗ ಕೂಲಿಗೆ ಇದ್ದರೆ, ಅವನಿಗೆ ಏನಾದರೂ ಜೀವನೋಪಾಯಕ್ಕೆ ಒದಗಬಹುದಾದ ಕಸುಬು ಕಲಿಸಿಕೊಡೋಣ ಎಂದು

ಬಂದೆ. ನನ್ನ ಈ ಮಸಿ ಗುಡಿಸುವ ಕೆಲಸದಲ್ಲಿ ಸಂಪಾದನೆ ಚೆನ್ನಾಗಿದೆ. ಆದರೆ ನನಗೆ ಸಹಾಯ ಕಡಿಮೆ. ನಾನು ಒಬ್ಬೊಂಟಿ. ಅದಕ್ಕಾಗಿ ನೋಡೋಣ ಎಂದು ಬಂದೆ."

"ನೋಡೋಣ. ಬಾ ಒಳಗೆ" ಎಂದು ಆ ಧರ್ಮದರ್ಶಿ ಅವನನ್ನು ಒಳಗೆ ಕರೆದ.

ಮಸಿ ಗುಡಿಸುವವನು ಹೋಗುವ ಮುಂದೆ ಕತ್ತೆಯ ತಲೆಯ ಮೇಲೆ ಇನ್ನೊಂದು ಏಟು ಬಿಗಿದು, ಪುನಃ ಅದರ ಮೂಗುದಾರವನ್ನು ತುಯ್ದು, "ಎಲ್ಲಿಯಾದರೂ ಕದಲಿ ಕಾಲಿಟ್ಟೀಯೆ!" ಎಂದು, ಬೆದರಿಸಿ ಒಳಗೆ ಹೋದ.

ಒಳಗೆ ಧರ್ಮದರ್ಶಿಗಳ ಸಭೆ ಪುನಃ ಸೇರಿತು. ಮಸಿ ಗುಡಿಸುವವನ ಪ್ರಾರ್ಥನೆಯನ್ನು ಲಾಲಿಸಿತು.

"ಮಸಿ ಗುಡಿಸುವ ಕೆಲಸ ಹೊಲಸು ಕೆಲಸ" ಎಂದ, ಒಬ್ಬ ಧರ್ಮದರ್ಶಿ.

"ಎಷ್ಟೋ ಸಣ್ಣ ಹುಡುಗರು ಹೊಗೆಯ ಕೊಳವೆಗಳಲ್ಲಿ ಸಿಕ್ಕಿಕೊಂಡು ಸತ್ತುಹೋಗಿರುವುದೂ ಉಂಟು" ಎಂದ ಇನ್ನೊಬ್ಬ.

ಅನಂತರ ಅವರೆಲ್ಲರೂ ತಮ್ಮತಮ್ಮಲ್ಲೆ ಪಿಸುಮಾತನಾಡಿಕೊಂಡರು.

ಕಡೆಗೆ ಮಸಿ ಗುಡಿಸುವವನನ್ನು ಕುರಿತು "ನಿನ್ನ ಪ್ರಾರ್ಥನೆಯನ್ನು ವಿಮರ್ಶಿಸಿದ್ದೇವೆ. ಹುಡುಗನನ್ನು ನಿನಗೆ ಕೊಡಲು ಸಾಧ್ಯವಿಲ್ಲ" ಎಂದು ಸಭೆಯ ಮುಖಂಡ ಹೇಳಿದ.

"ಸುತರಾಂ ಸಾಧ್ಯವೇ ಇಲ್ಲ" ಎಂದ ಇನ್ನೊಬ್ಬ.

"ಛೆ, ಛೆ! ಎಂಥ ಹುಡುಗ! ಹಾಗೆಲ್ಲಾ ಕಳುಹಿಸುವುದುಂಟೆ?" ಎಂದ ಇನ್ನೊಬ್ಬ.

ಮಸಿ ಗುಡಿಸುವವನು ತುಂಬ ಆಸೆಯಿಂದ ಬಂದಿದ್ದ. ಅನಾಥಾಲಯದಲ್ಲಿ ಎಷ್ಟು ಅನ್ನ ಹಾಕುತ್ತಾರೆಂಬುದು ಅವನಿಗೂ ಗೊತ್ತಿತ್ತು.

ಹುಡುಗನ ಹೊಟ್ಟೆಗೆ ಹೆಚ್ಚು ಹಾಕಬೇಕಾಗಿಲ್ಲ. ಅವನಿಂದ ತುಂಬ ದುಡಿಸಿಕೊಳ್ಳಬಹುದು. ಜೊತೆಗೆ ಐದು ಪೌಂಡು ಬಹುಮಾನ ಬೇರೆ. ಹೀಗೆಲ್ಲಾ ತುಂಬ ಆಸೆಯಿಂದ ಬಂದಿದ್ದ. ಆದರೆ ಸಭೆಯವರ ಮಾತು ಕೇಳಿ ಅವನಿಗೆ ತುಂಬಾ ನಿರಾಶೆಯಾಯಿತು. ಅದೂ ಅಲ್ಲದೆ ಅವನು ಹಿಂದೆ ನಾಲ್ಕಾರು ಹುಡುಗರನ್ನು ಹೀಗೇ ಕೂಲಿಗೆ ನೇಮಿಸಿಕೊಂಡು, ಅವರನ್ನು ಹೊಡೆದು, ಮೂಳೆ ಮುರಿದಿದ್ದ. ಆ ಕತೆ ಊರಿನವರಿಗೆಲ್ಲಾ ಗೊತ್ತಿತ್ತು. ಆದ್ದರಿಂದ ಆ ಮಸಿ ಗುಡಿಸುವವನು ಏನೂ ಮಾತನಾಡುವ ಹಾಗಿರಲಿಲ್ಲ.

ಆದರೂ ಒಂದು ಕಡೆಯ ಮಾತು ಕೇಳಿಬಿಡೋಣವೆಂದು, ಬಹಳ ನಮ್ರನಾಗಿ, ತನ್ನ ತಲೆಯ ಮೇಲಿನ ಟೋಪಿಯನ್ನು ಕೈಯಲ್ಲಿ ಹಿಡಿದು ಹಿಸುಕುತ್ತ, "ಹಾಗಾದರೆ, ಆ ಹುಡುಗನನ್ನು ನನಗೆ ಕೊಡುವುದಿಲ್ಲವೆ?" ಎಂದು ತುಂಬ ಸಂಕೋಚದಿಂದ ಕೇಳಿದ.

ಅದಕ್ಕೆ ಸಭೆಯ ಮುಖಂಡ "ಕೊಡುವುದೇ ಇಲ್ಲವೆಂದಲ್ಲ. ಆದರೆ ನಿನ್ನ ಈ ಹೊಲಸು ಕೆಲಸವನ್ನು ನೋಡಿದರೆ, ಐದು ಪೌಂಡು ಬಹಳ ಹೆಚ್ಚೆಂದು ತೋರುತ್ತದೆ" ಎಂದ.

ಸಭೆಯವರು "ಹೌದು, ಹೌದು. ತುಂಬ ಹೊಲಸು ಕೆಲಸ. ಹೌದು, ಹೌದು. ಐದು ಪೌಂಡು ತುಂಬ ಹೆಚ್ಚು" ಎಂದರು.

ಮಸಿ ಗುಡಿಸುವವನ ಮುಖ ಅರಳಿತು. "ಐದು ಪೌಂಡು ಹೆಚ್ಚು ಎನ್ನುವುದಾದರೆ, ಎಷ್ಟು ಕೊಡುತ್ತೀರಿ, ನೀವೇ ಹೇಳಿ. ಬಡವನ ಹೊಟ್ಟೆಯ ಮೇಲೆ ಹೊಡೆಯಬೇಡಿ. ನಾನೂ ಮಕ್ಕಳೊಂದಿಗ" ಎಂದು ಗೋಗರೆದನು.

"ಮೂರೂವರೆ ಪೌಂಡು ಸಾಕೆಂದು ನನಗೆ ತೋರುತ್ತದೆ" ಎಂದ ಸಭೆಯ ಮುಖಂಡ.

ಸಭೆಯವರು "ಓಹೋ ಬೇಕಾದಷ್ಟಾಯಿತು" ಎಂದರು.

"ಅಯ್ಯೋ, ಅಯ್ಯೋ, ನಾನು ಮುಳುಗಿಹೋದೆ, ಸ್ವಾಮಿ" ಎಂದು ಮಸಿ ಗುಡಿಸುವವನು ಗೋಳಾಡಿದ.

"ಛೆ, ಛೆ! ಅದೇ ಅತಿಯಾಯಿತು. ಹಾಗೆ ನೋಡಿದರೆ, ನೀನೇ ನಮಗೆ ಹಣ ಕೊಟ್ಟು ಹುಡುಗನನ್ನು ಕರೆದುಕೊಂಡು ಹೋಗಬೇಕು. ಏನೋ ನಾವೂ ಭೂತದಯೆ ಕರುಣೆ ಎಂದು ಬಹುಮಾನ ನೀಡಿದರೆ ಅದರಲ್ಲೂ ಚೌಕಾಶಿಯೆ? ಹೋಗಲಿ, ನಿನಗೋಸ್ಕರ ಮೂರೂವರೆ ಪೌಂಡು. ಹೋಗು, ಅವನನ್ನೂ ಕರೆದುಕೊಂಡು ಹೋಗು. ಆಗಾಗ್ಗೆ ಸ್ವಲ್ಪ ನಿನ್ನ ಕೈಯಲ್ಲಿರುವ ಕೋಲನ್ನು ಪ್ರಯೋಗಿಸಬೇಕಾದೀತು. ಆದರೂ ಬಹಳ ಒಳ್ಳೆಯ ಹುಡುಗ. ಎರಡು ಏಟು ಬಿದ್ದರೆ ಹೇಳಿದ ಹಾಗೆ ಕೇಳು ತ್ತಾನೆ. ನಿನಗೂ ಏನೂ ಹೆಚ್ಚು ಖರ್ಚಿಲ್ಲ. ಹುಟ್ಟಿದಂದಿನಿಂದ ಅವನು ಹೊಟ್ಟೆ ತುಂಬ ಊಟಮಾಡಿ ಅಭ್ಯಾಸವೇ ಇಲ್ಲ" ಎಂದು ಹೇಳಿ ಸಭೆಯ ಮುಖಂಡನು "ಹ ಹ್ಹ ಹ್ಹ ಹ್ಹ" ಎಂದು ಗಟ್ಟಿಯಾಗಿ ನಗತೊಡಗಿದನು.

ಅವನ ನಗು ಸಭೆಯವರಿಗೂ ಅಂಟಿಕೊಂಡಿತು. ಅವರ ನಗು ಮಸಿ ಗುಡಿಸುವವನಿಗೂ ವ್ಯಾಪಿಸಿತು.

"ಸರಿ. ಆಗಬಹುದು. ಈದಿನ ಮಧ್ಯಾಹ್ನ ಬಾ. ನಗರದ ನ್ಯಾಯಾಧೀಶರ ಬಳಿಗೆ ಹೋಗೋಣ. ಅವರ ಎದುರಿಗೆ ಹುಡುಗನನ್ನು ನಿನಗೆ ಒಪ್ಪಿಸಿಕೊಡುವ ಕಾಗದಪತ್ರಗಳಿಗೆ ರುಜು ಮಾಡುವೆಯಂತೆ" ಎಂದು ಸಭೆಯ ಮುಖಂಡ ಹೇಳಿದ.

ಮಸಿ ಗುಡಿಸುವವನು ಹಾಗೇ ಆಗಲೆಂದು ಸಂತೋಷ[illegible] ಕತ್ತೆಯನ್ನು ಹೊಡೆದುಕೊಂಡು ಮನೆಗೆ ಹೋದನು.

ಮಧ್ಯಾಹ್ನವಾಯಿತು. ಆಲಿವರನನ್ನು ನೆಲಮಾಳಿಗೆಯಿಂದ ಕರೆದು ತಂದು ಸ್ನಾನ ಮಾಡಿಸಿ, ಹೊಸ ಬಟ್ಟೆಗಳನ್ನು ಹಾಕಿಕೊಳ್ಳಹೇಳಿದರು. ಬಂಬಲ್ ತಾನೇ ತನ್ನ ಸ್ವಂತ ಕೈಗಳಿಂದ ಒಂದು ಬಟ್ಟಲು ತುಂಬಾ ಗಂಜಿ

ಯನ್ನೂ ಹಬ್ಬದ ದಿನಗಳಲ್ಲಿ ಕೊಡುತ್ತಿದ್ದ ಹಾಗೆ ರೊಟ್ಟಿಯ ಚೂರನ್ನೂ ತಂದುಕೊಟ್ಟ.

ಆಲಿವರನಿಗೆ ಮೊದಲು "ಇದು ತನಗೇ" ಎಂದು ನಂಬಿಕೆ ಬರಲಿಲ್ಲ. ಆದರೆ ಅವನು ಅದನ್ನು ತಿನ್ನಬೇಕೆಂದು ಬಂಬಲ್ ಬಲವಂತ ಮಾಡಲು, "ಓಹೋ! ಕುರಿ ಕೋಳಿಗಳನ್ನು ಕೊಬ್ಬಿಸಿ ಕೊನೆಗೆ ಅವುಗಳನ್ನು ಕಡಿದು ಕೊಲ್ಲುವ ಹಾಗೆ ನನ್ನನ್ನೂ ಆಮೇಲೆ ಕೊಲ್ಲುವುದಕ್ಕಾಗಿ ಈಗ ಹೀಗೆ ಕೊಬ್ಬಿಸುತ್ತಿದ್ದಾರೆ") ಎಂದುಕೊಂಡು ಒಂದೇ ಸಮನೆ ಅಳತೊಡಗಿದ.

"ಅಳಬೇಡ, ಆಲಿವರ್, ನಿನ್ನ ಅದೃಷ್ಟ ಚೆನ್ನಾಗಿದೆ. ನೀನೂ ಒಂದು ಕಸುಬು ಕಲಿತು, ಸ್ವಂತವಾಗಿ ಸಂಪಾದನೆ ಮಾಡುವ ಕಾಲ ಬಂದಿದೆ" ಎಂದು ಬಂಬಲ್ ಹೇಳಿದ.

ಹುಡುಗನಿಗೆ ಕಸುಬು ಎಂದರೆ ಅರ್ಥವಾಗಲಿಲ್ಲ, "ಕಸುಬೆ?" ಎಂದು ಕೇಳುತ್ತಾ ಥರಥರನೆ ನಡುಗಿದ.

"ಕಸುಬು, ಆಲಿವರ್. ಯಾರೋ ಒಬ್ಬರು ನಿನ್ನ ಮೇಲೆ ದಯೆ ಯಿಟ್ಟು ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದಾರೆ. ಅವರು ನಿನಗೆ ಒಂದು ಒಳ್ಳೆಯ ಕೆಲಸ ಕಲಿಸಿಕೊಡುತ್ತಾರೆ. ನಾಳೆ ನೀನೂ ಮಿಕ್ಕವರ ಹಾಗೇ ನಿನ್ನ ಅನ್ನ ನೀನೇ ಸಂಪಾದಿಸಿಕೊಳ್ಳಬಹುದು. ನಿನ್ನಂಥ ತುಂಟನಿಗೋಸ್ಕರ ನಮ್ಮ ಈ ಅನಾಥಾಲಯಕ್ಕೆ ಎಷ್ಟು ವೆಚ್ಚ ವಾಗುತ್ತದೆ, ಗೊತ್ತೆ? ಮೂರೂವರೆ ಪೌಂಡ್, ಆಲಿವರ್! ಎಂದರೆ ಎಪ್ಪತ್ತು ಷಿಲ್ಲಿಂಗ್! ಎಂದರೆ ಎಂಟುನೂರ ನಲವತ್ತು ಪೆನ್ನಿ! ಗೊತ್ತಾ ಯಿತೆ?" ಎಂದ ಬಂಬಲ್.

ಪಾಪ, ಆಲಿವರನಿಗೆ ಏನೂ ಗೊತ್ತಾಗಲಿಲ್ಲ. ಅವನಿಗೆ ಅಳುವುದು ಒಂದೇ ಗೊತ್ತಾದದ್ದು. ಅತ್ತೂ ಅತ್ತೂ ಅವನ ಕಣ್ಣಿನ ಉಪ್ಪುನೀರು ಕೆನ್ನೆಯ ಮೇಲೆ ಕೋಡಿ ಹರಿದು ಅವನ ಗಂಜಿಯ ಬಟ್ಟಲಿನಲ್ಲಿ ಬೀಳು

ತ್ತಿತ್ತು. ಆ ಗಂಜಿ ಮೊದಲೇ ಬರೀ ನೀರು, ಅವನ ಕಣ್ಣೀರು ಸೇರಿ ಇನ್ನಷ್ಟು ನೀರಾಯಿತು.

ಕಡೆಗೆ ಬಂಬಲ್ "ಛೆ, ಇದೇನು, ಆಲಿವರ್? ಅಂಗಿಯ ತೋಳಿನಿಂದ ಕಣ್ಣೊರಸಿಕೊ. ಗಂಜಿ ಆರಿಹೋಗುತ್ತದಲ್ಲ. ಬಿಸಿಯಾಗಿರುವಾಗಲೇ ಕುಡಿದುಬಿಡು" ಎಂದು ಅನೇಕ ಸಲ ಹೇಳಿದ ಮೇಲೆ, ಆಲಿವರ್ ತನ್ನ ಊಟವನ್ನು ಮುಗಿಸಿದ.

ಮಧ್ಯಾಹ್ನ ಆಲಿವರನನ್ನು ಕರೆದುಕೊಂಡು ಬಂಬಲ್ ನ್ಯಾಯಾಧಿಕಾರಿಯ ಬಳಿಗೆ ಹೊರಟ. ದಾರಿಯ ಉದ್ದಕ್ಕೂ "ಆಲಿವರ್, ನೋಡು; ನ್ಯಾಯಾಧಿಕಾರಿಯ ಮುಂದೆ ಅಳಕೂಡದು, ಗೋಳಾಡಕೂಡದು. ನಗುತ್ತಿರಬೇಕು. ಅವನು ಯಾರನ್ನಾದರೂ ತೋರಿಸಿ 'ಇವನ ಕೈಕೆಳಗೆ ಕೆಲಸ ಕಲಿಯುತ್ತೀಯಾ?' ಎಂದು ಕೇಳಿದರೆ, 'ಸಂತೋಷವಾಗಿ ಕಲಿಯುತ್ತೇನೆ' ಎಂದು ಹೇಳಬೇಕು" ಎಂದು ಬಂಬಲ್ ಆಲಿವರನಿಗೆ ಅವನು ಏನೇನು ಮಾಡಬೇಕೆಂಬುದನ್ನೆಲ್ಲಾ ಹೇಳಿಕೊಟ್ಟ.

ಅವರು ನ್ಯಾಯಾಸ್ಥಾನಕ್ಕೆ ಬರುವ ವೇಳೆಗೆ ನ್ಯಾಯಾಧಿಕಾರಿ ಕರಾರಿನ ಕಾಗದಪತ್ರಗಳನ್ನು ಪರಿಶೀಲಿಸುತ್ತಿದ್ದನು. ಅನಾಥಾಲಯದ ಧರ್ಮದರ್ಶಿಗಳಲ್ಲಿ ಮುಖ್ಯನಾದವನೊಬ್ಬನು ಅವನ ಮುಂದೆ ನಿಂತುಕಾಯ್ದುಕೊಂಡಿದ್ದ. ಮಸಿ ಗುಡಿಸುವವನೂ ಸ್ವಲ್ಪಮಟ್ಟಿಗೆ ಮುಖ ತೊಳೆದುಕೊಂಡು ಚೊಕ್ಕಟವಾಗಿ ಬಂದಿದ್ದ.

ಬಂಬಲ್ ಬಂದೊಡನೆಯೆ ನ್ಯಾಯಾಧಿಪತಿ ಅವನ ಜೊತೆಯಲ್ಲಿದ್ದ ಹುಡುಗನನ್ನು ನೋಡಿ, "ಇವನೇಯೋ ಹುಡುಗ?" ಎಂದು ಕೇಳಿದ.

"ಹೌದು, ಸ್ವಾಮಿ. ಇವನೇ" ಎಂದು ಹೇಳಿ, ಬಂಬಲ್ "ಅವರಿಗೆ ನಮಸ್ಕಾರ ಮಾಡು, ಮಗು" ಎಂದು ಮೃದುವಾಗಿ ಹೇಳಿದ.

ಆಲಿವರನಿಗೆ ಅವನು ಮೃದುವಾಗಿ ಹೇಳಿದುದು ಆಶ್ಚರ್ಯವಾಯಿತು. ನ್ಯಾಯಾಧಿಕಾರಿಗೆ ಅವನು ಬಗ್ಗಿ ನಮಸ್ಕರಿಸಿದ.

"ಹೊಗೆಯ ಕೊಳವೆಗಳಲ್ಲಿ ಮಸಿ ಗುಡಿಸುವುದಕ್ಕೆ ಹುಡುಗ ಇಷ್ಟ ಪಡುತ್ತಾನೋ?" ಎಂದು ನ್ಯಾಯಾಧಿಕಾರಿ ಕೇಳಿದ.

"ಅಯ್ಯೋ, ಅಯ್ಯೋ, ಮಸಿ ಗುಡಿಸುವುದೆಂದರೆ ಅವನಿಗೆ ಪ್ರಾಣ" ಎಂದು ಹೇಳಿ, ಬಂಬಲ್ ಯಾರಿಗೂ ಕಾಣದಂತೆ ಒಂದು ಸಲ ಆಲಿವರನನ್ನು ಜಿಗುಟಿದ. 'ನೀನೂ ಹೌದು ಎನ್ನದಿದ್ದರೆ ನಿನ್ನನ್ನು ಸಿಗಿದು ತೋರಣ ಕಟ್ಟಿಬಿಡುತ್ತೇನೆ' ಎಂದು ಆಲಿವರ್ ಆ ಜಿಗುಟಿದ್ದರಿಂದ ಅರ್ಥ-ಮಾಡಿಕೊಂಡ. ಅವನ ಕಣ್ಣುಗಳಲ್ಲಿ ಕೊಂಚಕೊಂಚವಾಗಿ ನೀರು ತುಂಬಿಕೊಂಡಿತು.

"ಹಾಗಾದರೆ, ಮಸಿ ಗುಡಿಸುವ ಕೆಲಸಕ್ಕೆ ಸೇರಲು ಇವನಿಗೆ ಏನೂ ಆಕ್ಷೇಪವಿಲ್ಲವಷ್ಟೆ?" ಎಂದು ನ್ಯಾಯಾಧಿಕಾರಿ ಪುನಃ ಕೇಳಿದ.

"ಅಯ್ಯೋ, ಅಯ್ಯೋ, ಮಸಿ ಗುಡಿಸಬೇಡವೆಂದರೆ ಮನೆ ಬಿಟ್ಟು ಓಡಿಹೋಗುತ್ತೇನೆಂದು ಹೆದರಿಸುತ್ತಾನೆ, ಸ್ವಾಮಿ" ಎಂದು ಬಂಬಲ್ ಹೇಳಿದ.

"ಹಾಗಾದರೆ ಸರಿ" ಎಂದು ನ್ಯಾಯಾಧಿಕಾರಿ ಆ ಮಸಿ ಗುಡಿಸುವವನ ಕಡೆ ತಿರುಗಿ "ಏನಯ್ಯಾ, ಈ ಹುಡುಗನನ್ನು ಚೆನ್ನಾಗಿ ಕಾಪಾಡುತ್ತೀಯೆ ತಾನೆ? ಇವನಿಗೆ ಹೊಟ್ಟೆಗೆ ಬಟ್ಟೆಗೆ ಸರಿಯಾಗಿ ಹಾಕುತ್ತೀಯೆ ತಾನೆ?" ಎಂದು ಕೇಳಿದ.

"ಹಾಕುತ್ತೇನೆ ಎಂದ ಮೇಲೆ ಹಾಕದೆ ಇದ್ದರೆ ಮರ್ಯಾದೆ ಬರುತ್ತದೆಯೆ?" ಎಂದ, ಆ ಮಸಿ ಗುಡಿಸುವವ.

"ಸರಿ, ಹಾಗೆಂದು ಒಪ್ಪಿಕೊಳ್ಳುವುದಾದರೆ ಇದೋ ಈ ಕರಾರು ಪತ್ರಕ್ಕೆ ರುಜು ಮಾಡು" ಎಂದು ನ್ಯಾಯಾಧಿಕಾರಿ ಪೇನಾ ತೆಗೆದು ಅದ್ದಬೇಕೆಂದು ಮಸಿಕುಡಿಕೆಯ ಕಡೆ ನೋಡಿದ.

ಮಸಿಕುಡಿಕೆ ದಿನವೂ ಇದ್ದ ಕಡೆ ಇರಲಿಲ್ಲ. ಅದೇನಾದರೂ ಅಲ್ಲಿ ಇದ್ದಿದ್ದರೆ, ಆಲಿವರನ ಕತೆ ಮುಗಿದುಹೋಗುತ್ತಿತ್ತು. ಮಸಿ ಗುಡಿಸು

ವವನು ಕರಾರುಪತ್ರಕ್ಕೆ ರುಜು ಮಾಡಿ, ಆಲಿವರನನ್ನು ಜೇಬಿಗೆ ಹಾಕಿಕೊಂಡು ಹೋಗಿಬಿಡುತ್ತಿದ್ದ. ಆಲಿವರನನ್ನು ಮಿತಿಮೀರಿ ದುಡಿಸಿ, ಅವನನ್ನು ಅತಿಯಾಗಿ ಬಡಿದು ಕೊಂದುಬಿಡುತ್ತಿದ್ದ. ಆಲಿವರನ ಅದೃಷ್ಟ ಚೆನ್ನಾಗಿದ್ದುದರಿಂದ ಮಸಿಕುಡಿಕೆ ತಟ್ಟನೆ ಅವನ ಕಣ್ಣಿಗೆ ಬೀಳಲಿಲ್ಲ.

ಹಾಗಾಗಿ, ಮಸಿಕುಡಿಕೆ ಎಲ್ಲಿ ಎಂದು ಹುಡುಕುತ್ತಾ ಇದ್ದ ನ್ಯಾಯಾಪತಿಯ ಕಣ್ಣಿಗೆ ಸಣ್ಣ ಆಲಿವರನ ಮುಖ ಕಾಣಿಸಿತು. ಆಲಿವರನು ಮಸಿಗುಡಿಸುವವನ ಕ್ರೂರವಾದ ಮುಖವನ್ನೇ ಹೆದರಿಕೆಯಿಂದ ನೋಡಿ ನಡುಗುತ್ತಿದ್ದುದನ್ನು ಅವನು ಕಂಡ. ಕಂಡೊಡನೆಯೆ, ಅವನಿಗೆ ಆದೇನೆನ್ನಿಸಿತೋ, ತಲೆ ತಿರುಗಿಸಿ ಧರ್ಮದರ್ಶಿಯ ಮುಖ ನೋಡಿದ. ಧರ್ಮದರ್ಶಿ ಏನೂ ಗೊತ್ತಿಲ್ಲದವನ ಹಾಗೆ ಮೂಗಿಗೆ ಒಂದು ಚಿಟಿಕೆ ನಶ್ಯ ಏರಿಸಿ, ಬಟ್ಟೆಯಿಂದ ಒರಸಿಕೊಂಡ.

ಆಗ ನ್ಯಾಯಾಧಿಪತಿ "ಇದೇಕೋ ಹುಡುಗ ಹೆದರಿದ್ದಾನೆ" ಎಂದುಕೊಂಡು, ಆಲಿವರನನ್ನು ಕುರಿತು "ಏನಪ್ಪಾ, ಮಗು?" ಎಂದ.

ಆಲಿವರ್ ಬೆಚ್ಚಿದ. ಹಿಂದೆ ಬಂಬಲ್ ಮೃದುವಾಗಿ ಮಾತನಾಡಿದಾಗಲೂ ಹೀಗೆಯೇ ಬೆಚ್ಚಿದ್ದ. ಮೃದುವಾದ ಶಬ್ದಗಳನ್ನು ಕೇಳಿ ರೂಢಿಯೇ ಇಲ್ಲದಿದ್ದ ಆಲಿವರ್ ಬೆಚ್ಚಿದ್ದು ಏನೂ ಆಶ್ಚರ್ಯವಲ್ಲ. ಆಲಿವರ್ ಬೆಚ್ಚಿದ, ಬೆದರಿದ, ಗಡಗಡನೆ ನಡುಗಿದ, ಮೊದಲಿಗಿಂತ ಹೆಚ್ಚಾಗಿ ಅಳತೊಡಗಿದ.

ನ್ಯಾಯಾಧಿಪತಿ ಮೇಜಿನ ಮೇಲೆ ಬಗ್ಗಿ, ದಯೆಯಿಂದ ಆಲಿವರನ ಕಡೆ ನೋಡಿ, "ಏಕೆ ಮಗು, ಹೀಗೆ ಹೆದರುತ್ತೀಯೆ? ಹೀಗೇಕೆ ನಡುಗುತ್ತೀಯೆ? ಹೀಗೇಕೆ ಅಳುತ್ತೀಯೆ?" ಎಂದು ಕೇಳುತ್ತಾ ಸಂತೈಸುತ್ತಿರುವಾಗ ಬಂಬಲ್ ಅವನನ್ನು ತಿವಿಯುವುದನ್ನು ಕಂಡು, "ಎಲ್ಲಿ? ನೀನು ಈಚೆ ದೂರ ಬಾ" ಎಂದು ಬಂಬಲನನ್ನು ಈಚೆ ಕರೆದು, "ಈಗ

ಹೇಳು, ಮಗು. ಹೆದರಿಕೆಯಿಲ್ಲದೆ ಹೇಳು. ಏಕೆ ಅಳುತ್ತೀಯೆ?" ಎಂದು ಕೇಳಿದನು.

ಅವನ ಮೃದುವಾದ ಮಾತು ಕೇಳಿ, ಅವನ ದಯೆ ತುಂಬಿದ ಮುಖ ವನ್ನು ನೋಡಿ ಆಲಿವರನಿಗೆ ಸ್ವಲ್ಪ ಧೈರ್ಯ ಬಂತು. ಅವನು ನ್ಯಾಯಾಧಿ ಪತಿಯ ಮುಂದೆ ಮೊಣಕಾಲೂರಿ ಕೈಜೋಡಿಸಿಕೊಂಡು, "ನಿಮ್ಮ ಧರ್ಮ, ಅಯ್ಯ! ನನ್ನನ್ನು ನೆಲಮಾಳಿಗೆಯಲ್ಲಿ ಕೂಡಿಹಾಕಿದರೂ ಸರಿ, ಊಟವಿಲ್ಲದೆ ಉಪ ವಾಸ ಕೆಡವಿದರೂ ಸರಿ; ಹೊಡೆಯಿರಿ, ಬಡಿಯಿರಿ, ಏನು ಬೇಕಾದರೂ ಮಾಡಿ; ಬೇಕಾದರೆ ನೀವು ನನ್ನನ್ನು ಕೊಂದುಹಾಕಿಬಿಡಿ; ಆದರೆ ಮಾತ್ರ ಈ ಇವನೊಡನೆ ನನ್ನನ್ನು ಕಳಿಸಬೇಡಿ" ಎಂದು ಗೋಳಾಡುತ್ತಾ ಬೇಡಿ ಕೊಂಡನು.

"ಓಹೋ, ಹಾಗೇನು!" ಎಂದ ನ್ಯಾಯಾಧಿಪತಿ. ಹುಡುಗನನ್ನು ಬಲವಂತಪಡಿಸುತ್ತಿರುವರೆಂದು ಅವನಿಗೆ ಅರ್ಥವಾಯಿತು.

ಬಂಬಲ್ ಆಶ್ಚರ್ಯದಿಂದಲೂ ಕೋಪದಿಂದಲೂ ಏನು ಹೇಳಬೇಕೋ ತೋಚದೆ, "ಅಬ್ಬಾ! ಹೀಗೂ ಉಂಟೆ? ನಾನು ಹೋಗುತ್ತೇನೆ ಎಂದು ಅಲ್ಲಿ ಒಪ್ಪಿಕೊಂಡು ಬಂದು, ಈಗ ಇಲ್ಲಿ ಹೀಗೆ ಹೇಳುತ್ತಾನಲ್ಲ! ಇಷ್ಟು ಚೋಟುದ್ದ ಇರುವಾಗಲೇ ಹೀಗೆ ಮೋಸ ಕಲಿತರೆ, ಬೆಳೆದ ಮೇಲೆ ಇವನ ಗತಿ ಏನು?" ಎಂದು ಕಣ್ಣು ಅರಳಿಸಿದ.

ನ್ಯಾಯಾಧಿಪತಿ ಅವನ ಕಡೆ ತಿರುಗಿ, "ಸ್ವಲ್ಪ ಬಾಯಿ ಮುಚ್ಚಿಕೊ" ಎಂದ.

ಬಂಬಲ್ ಬೆಪ್ಪು ಹಿಡಿದವನ ಹಾಗಾಗಿ "ಏನೆಂದಿರಿ? ನನ್ನನ್ನು ಮಾತನಾಡಿಸಿದಿರಾ?" ಎಂದ.

"ಹೌದು, ನಿನ್ನನ್ನೇ. ಬಾಯಿ ಮುಚ್ಚಿಕೊ ಎಂದೆ."

ಬಂಬಲ್‌ಗೆ ನಿಜವಾಗಿಯೂ ಬಾಯಿ ಮುಚ್ಚಿಯೇಹೋಯಿತು.

ಅದುವರೆಗೆ ಒಂದು ದಿನವಾದರೂ ಯಾರೂ ಅವನಿಗೆ ಹೀಗೆ ಮುಖ ಮುರಿದಿರಲಿಲ್ಲ.

ಕಡೆಗೆ ನ್ಯಾಯಾಧಿಪತಿ ತನ್ನ ಎದುರಿಗೆ ಇಟ್ಟುಕೊಂಡಿದ್ದ ಕರಾರು ಪತ್ರವನ್ನು ಮುದುರಿ ಎಸೆದು, "ಈ ಹುಡುಗನನ್ನು ಈ ಮಸಿ ಗುಡಿಸುವವನಿಗೆ ಒಪ್ಪಿಸಿಕೊಡಲು ಸಾಧ್ಯವಿಲ್ಲ. ಈ ಹುಡುಗನನ್ನು ಪುನಃ ಅನಾಥಾಲಯಕ್ಕೇ ಕರೆದುಕೊಂಡು ಹೋಗಿ. ಸ್ವಲ್ಪ ಹೊಟ್ಟೆ ತುಂಬ ಏನಾದರೂ ಹಾಕಿದರೆ ಹುಡುಗ ಬದುಕಿಕೊಂಡಾನು" ಎಂದನು.

ಬಂಬಲ್ ಬೇರೆ ಏನೂ ಮಾರ್ಗವಿಲ್ಲದೆ ಆಲಿವರನನ್ನು ಪುನಃ ಬಂದ ದಾರಿಯಲ್ಲೇ ಕರೆದುಕೊಂಡು ಹೋದ. "ಆಲಿವರನನ್ನು ಯಾರಾದರೂ ಕೂಲಿಗೆ ಕರೆದುಕೊಳ್ಳಬಹುದು. ಕರೆದುಕೊಂಡವರಿಗೆ ಐದು ಪೌಂಡು ಬಹುಮಾನ" ಎಂಬ ತಿಳಿವಳಿಕೆಯ ಚೀಟಿ ಮತ್ತೊಮ್ಮೆ ಅನಾಥಾಲಯದ ಬಾಗಿಲ ಮೇಲೆ ಕಾಣಿಸಿಕೊಂಡಿತು.

## "ಯಾರಿಗೆ ಬೇಕು ಆಲಿವರ್!"

"ತೊಲಗಿಹೋಯಿತು ಎಂದುಕೊಂಡರೆ ತಿರುಗಿ ಬಂತು ಈ ಶನಿ" ಎಂದುಕೊಂಡು, ಅನಾಥಾಲಯದ ಅಧಿಕಾರಿಗಳು ಬಂಬಲನನ್ನು ಕರೆದು, "ಸಮುದ್ರಯಾನ ಮಾಡುವ ಯಾವನಾದರೂ ನಾವಿಕನಿಗೆ ಏನಾದರೂ ಒಬ್ಬ ಹುಡುಗ ಬೇಕಾಗಿದೆಯೇ ಎಂದು ವಿಚಾರಿಸಿಕೊಂಡು ಬಾ. ಇವನನ್ನು ಎಲ್ಲಿಗಾದರೂ ಪುನಃ ಹಿಂದಿರುಗದ ಹಾಗೆ ಕಳುಹಿಸಿಬಿಡೋಣ" ಎಂದರು. ಬಂಬಲ್ ಅವರ ಆಜ್ಞೆಯಂತೆ ಹುಡುಕುತ್ತಾ, ಆಲಿವರನನ್ನು ಕರೆದುಕೊಂಡು ಹೋಗಲು ಯಾರಾದರೂ ಸಿಕ್ಕಿಯಾರೇ ಎಂದು ನೋಡುತ್ತಿದ್ದ.

ಒಂದು ದಿನ ಹೀಗೆ ಹುಡುಕಾಡಿಕೊಂಡು ಅನಾಥಾಲಯಕ್ಕೆ ಹಿಂದಿರುಗಿದಾಗ, ಬಾಗಿಲ ಹತ್ತಿರ ಸವರ್‌ಬೆರಿ ಎಂಬವನನ್ನು ಎದುರುಗೊಂಡ.

ಆ ಊರಿನಲ್ಲಿ ಯಾರಾದರೂ ಸತ್ತುಹೋದರೆ, ಅವರನ್ನು ಸಮಾಧಿ ಮಾಡುವುದಕ್ಕೆ ಬೇಕಾದ ಏರ್ಪಾಡುಗಳನ್ನು ಈ ಸವರ್‌ಬೆರಿ ನೋಡಿ ಕೊಳ್ಳುತ್ತಿದ್ದ.

ಇಂತಹ ಸವರ್‌ಬೆರಿಯು ಹತ್ತಿರ ಊರಿನ ಯೋಗಕ್ಷೇಮಗಳನ್ನು ವಿಚಾರಿಸುತ್ತಾ ಹಾಗೆಯೇ ಬಂಬಲ್ "ಅಂದ ಹಾಗೆ, ಸವರ್‌ಬೆರಿ, ನಮ್ಮಲ್ಲಿ ಒಬ್ಬ ಹುಡುಗ ಇದ್ದಾನೆ. ಅವನನ್ನು ಕೂಲಿಗೆ ಇಟ್ಟುಕೊಳ್ಳು ವವರು ಯಾರಾದರೂ ಗೊತ್ತೇನು? ಹುಡುಗನನ್ನು ಕರೆದುಕೊಳ್ಳು ವುದಾದರೆ ಜೊತೆಗೆ ದಕ್ಷಿಣೆಯೂ ಇದೆ" ಎಂದು ಹೇಳುತ್ತಾ ತನ್ನ ಕೋಲ ನ್ನೆತ್ತಿ ಅನಾಥಾಲಯದ ಬಾಗಿಲ ಮೇಲೆ ಅಂಟಿಸಿದ್ದ ತಿಳಿವಳಿಕೆಯ ಚೀಟಿ ಯನ್ನು ಮೂರು ನಾಲ್ಕು ಸಲ ತಿವಿದ.

ಅವನು ತಿವಿದ ಕಡೆ "ಐದು ಪೌಂಡು" ಎಂದು ಪಪ್ಪ ಅಕ್ಷರಗಳಲ್ಲಿ ಬರೆದಿತ್ತು.

"ಆಃ! ನಾನು ಅದನ್ನೇ ಕುರಿತು ನಿನ್ನ ಹತ್ತಿರ ಮಾತನಾಡ ಬೇಕೆಂದು ಇಲ್ಲಿಗೆ ಬಂದೆ" ಎಂದು ಸವರ್‌ಬೆರಿ ಹೇಳಿದ.

"ಓ! ಹಾಗೇನು! ಯಾರು?"

"ಬೇರೆ ಯಾರೂ ಇಲ್ಲ. ನಾನೇ ಕರೆದುಕೊಂಡು ಹೋಗ ಬೇಕೆಂದಿದ್ದೆ"

"ಸದ್ಯಃ ನೀನು ಅಷ್ಟು ಉಪಕಾರ ಮಾಡಿದರೆ, ನಾವೆಲ್ಲಾ ಬದುಕಿ ಕೊಂಡೇವು" ಎಂದು ಬಂಬಲ್ ಅವನ ತೋಳು ಹಿಡಿದು, ಅನಾಥಾಲಯದ ಒಳಕ್ಕೆ ಕರೆದುಕೊಂಡು ಹೋಗಿ ಸಭೆಯವರಿಗೆ ತಿಳಿಸಿದ.

ಸಭೆಯವರಿಗೂ ಸವರ್‌ಬೆರಿಗೂ ಏನೇನು ಮಾತುಕತೆ ನಡೆಯಿತೋ ಗೊತ್ತಿಲ್ಲ. ನಡೆದುದೆಲ್ಲಾ ಗುಟ್ಟಾಗಿ ನಡೆಯಿತು. ಕಡೆಗೆ ಅವನು ಆಲಿವರ ನನ್ನು ಕರೆದುಕೊಂಡು ಹೋಗಬಹುದೆಂದೂ ಅವನ ನಡತೆಯೇನಾದರೂ

ತೃಪ್ತಿಕರವಾಗಿಲ್ಲದಿದ್ದರೆ ಅವನನ್ನು ಉಪವಾಸ ಕೆಡಹಿ ಅವನಿಗೆ ಬುದ್ಧಿ ಕಲಿಸಬೇಕೆಂದೂ ಇತ್ಯರ್ಥವಾಯಿತು.

ಅದೇ ಪ್ರಕಾರ ಆಲಿವರನನ್ನು ಕರೆದು ಅವನಿಗೆ ಒಪ್ಪಿಸಿಕೊಡುವಾಗ ಸಭೆಯವರು "ನೋಡು, ಆಲಿವರ್, ಈ ಸವರ್‌ಬೆರಿ ಇನ್ನು ಮುಂದೆ ನಿನ್ನ ಯಜಮಾನ. ಈ ಊರಿನಲ್ಲಿ ಸತ್ತವರಿಗೆಲ್ಲ ಸಮಾಧಿ ಮಾಡುವವನು ಇವನೇ. ಇವನು ಹೇಳಿದ ಹಾಗೆ ನೀನು ಕೇಳಿಕೊಂಡಿರಬೇಕು. ನೀನು ಹಾಗೆ ನಡೆದುಕೊಳ್ಳದೆ ಪುನಃ ಏನಾದರೂ ಇಲ್ಲಿಗೆ ಬಂದೆಯಾದರೆ ನಿನ್ನನ್ನು ಯಾವುದಾದರೂ ಹಡಗಿನಲ್ಲಿ ಹಾಕಿ ಕಳುಹಿಸಿಬಿಡುತ್ತೇವೆ. ಅಲ್ಲಿ ಸಮುದ್ರ ದಲ್ಲಿ ಮುಳುಗಿಸಿಯೋ ತಲೆಯ ಮೇಲೆ ಬಡಿದೋ ನಿನ್ನನ್ನು ಕೊಂದು ಬಿಡುತ್ತಾರೆ. ತಿಳಿಯಿತೆ?" ಎಂದರು.

ಆಲಿವರನಿಗೆ ಅವರು ಹೇಳಿದುದು ಒಂದೂ ಅರ್ಥವಾಗಲಿಲ್ಲ. ಈ ಸಲ ಅವನು ಅಳಲೂ ಇಲ್ಲ. ಸಭೆಯವರು ಸಿಟ್ಟಾಗಿ, "ಶುದ್ಧ ಮೊಂಡ. ಇಂಥವನನ್ನು ಏನು ಮಾಡಿದರೂ ತೀರದು" ಎಂದು, ಬಂಬಲನನ್ನು ಕರೆದು, "ಇವನನ್ನು ಆಚೆ ತೊಲಗಿಸಿಬಿಡು" ಎಂದರು.

ಆಲಿವರ್ ಮಾತನಾಡದೆ ಹೊರಡಲು ಸಿದ್ಧನಾದ. ಸಿದ್ಧನಾದ ಎಂಬುದೇನು—ಸಿದ್ಧತೆ ಏನೂ ಇಲ್ಲದವನು ಹೊರಡಲು ಸಿದ್ಧನಾಗಿಯೇ ಇದ್ದ. ಬಂಬಲ್ ತನ್ನ ಕೈ ನೀಡಿದ. ಆಲಿವರ್ ಅವನ ಅಂಗಿಯ ತೋಳನ್ನು ಹಿಡಿದುಕೊಂಡು, ಎಲ್ಲಿಗೆ ಎಂಬುದು ಗೊತ್ತಿಲ್ಲದೆ ಅವನ ಹಿಂದೆ ಹೊರಟ.

ಸ್ವಲ್ಪ ಹೊತ್ತಿನಲ್ಲಿಯೇ ಸವರ್‌ಬೆರಿಯ ಮನೆ ಹತ್ತಿರವಾಯಿತು. ಬಂಬಲ್ ಆಲಿವರನ ಕಡೆ ನೋಡಿದ. 'ಟೋಪಿ ಸರಿಮಾಡಿಕೊ' ಎಂದ. ಆ ವೇಳೆಗೆ ಆಲಿವರನ ಕಣ್ಣಲ್ಲಿ ಒಂದೆರಡು ಹನಿ ಕೂಡಿಕೊಂಡಿತ್ತು. 'ಅಳ ಬೇಡ' ಎಂದು ಬಂಬಲ್ ಗದರಿದ. ಒಂದೊಂದಾಗಿ ಹನಿ ಆಲಿವರನ ಕೆನ್ನೆಯ ಮೇಲೆ ಜಾರಿತು. ಅವನು ಅಳುವನ್ನು ತಡೆದುಕೊಳ್ಳುವುದಕ್ಕೆ

ಎಷ್ಟೆಷ್ಟು ಕಷ್ಟಪಟ್ಟರೆ ಅಷ್ಟಷ್ಟು ಕಣ್ಣೀರು ಉಕ್ಕಿಬರುತ್ತಿತ್ತು. ತಡೆಯು ಲಾರದೆ ಆಲಿವರ್ ತಾನು ಹಿಡಿದಿದ್ದ ಬಂಬಲನ ಅಂಗಿಯ ತೋಳನ್ನು ಬಿಟ್ಟು, ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳ ತೊಡಗಿದ. ಅವನ ಕೈಬೆರಳುಗಳ ಮೂಳೆಯ ಸಂದಿನಿಂದ ಕಣ್ಣೀರು ತಪ್ಪಿಸಿಕೊಂಡು ತೊಟ್ಟಿಕ್ಕಿತು.

ಬಂಬಲನಿಗೋ ರೇಗಿಹೋಯಿತು. ಹುಡುಗನನ್ನು ಕಣ್ಣುಗಳಿಂದಲೇ ತಿಂದುಬಿಡುವ ಹಾಗೆ ನೋಡುತ್ತ, "ಆಲಿವರ್! ಆಲಿವರ್!" ಎಂದು ಹಲ್ಲು ಕಡಿದ.

ಆಲಿವರ್ ಹೆದರಿಕೆಯಿಂದ ದೇಹವನ್ನು ಕುಗ್ಗಿಸಿ ಸಂಕೋಚ ಮಾಡಿ ಕೊಂಡು, ಬಂಬಲನ ಕೈಯಲ್ಲಿದ್ದ ಬೆತ್ತವನ್ನು ಬಿಗಿಯಾಗಿ ಹಿಡಿದುಕೊಂಡು "ಇಲ್ಲಾ, ಇಲ್ಲಾ. ಅಳುವುದಿಲ್ಲ. ಹೇಳಿದ ಹಾಗೆ ಕೇಳುತ್ತೇನೆ" ಎಂದು ದೈನ್ಯದಿಂದ ಹೇಳಿದ.

"ಮತ್ತೇಕೆ ಹೀಗೆ ಗೋಳಾಡುತ್ತೀ?" ಎಂದು ಬಂಬಲ್ ಉರಿ ದುರಿದು ಬಿದ್ದ.

ಆಲಿವರ್ ಬಿಕ್ಕಿಬಿಕ್ಕಿ ಅಳುತ್ತ "ನನಗೆ ಯಾರೂ ಗತಿಯಿಲ್ಲ. ನಾನು ಪರದೇಶಿ. ನನ್ನನ್ನು ಕಂಡರೆ ಯಾರಿಗೂ ಆಗುವುದಿಲ್ಲ. ದಯ ಮಾಡಿ ನನ್ನನ್ನು ಗದರಿಸಿಕೊಳ್ಳಬೇಡಿ" ಎಂದು ಕೈ ಕೈ ಹಿಸುಕಿಕೊಂಡು ಬೇಡಿಕೊಂಡ.

ಹುಡುಗನ ಮುಖದಲ್ಲಿ ಕಂಡ ಪೇಚಾಟವನ್ನೂ ಅವನ ಧ್ವನಿ ಯಲ್ಲಿದ್ದ ನೋವನ್ನೂ ಬಂಬಲ್ ಗಮನಿಸಿದ. ಅವನಿಗೂ ಒಂದು ಅರೆ ಕ್ಷಣ ಅಯ್ಯೋ ಪಾಪ ಎನ್ನಿಸಿತು. ಸ್ವಲ್ಪ ನಾಚಿಕೆಯೂ ಆಯಿತು. ಎರಡು ಮೂರು ಸಲ ಕೆಮ್ಮಿದ ಹಾಗೆ ಸದ್ದುಮಾಡಿ, "ಸರಿ, ಸರಿ. ಸಾಕು, ಸಾಕು. ಕಣ್ಣು ಒರೆಸಿಕೊ. ಬಾ, ಬಾ." ಎಂದು ಕೈಹಿಡಿದು ಅವನನ್ನು ಕರೆದುಕೊಂಡು ಹೋದ.

ಸವರ್‌ಬೆರಿಯ ಮನೆಗೆ ಅವರು ಬಂದ ಹೊತ್ತು ಸಾಯಂಕಾಲ. ಆ ವೇಳೆಗೆ ಅವನು ತನ್ನ ಅಂಗಡಿಯ ಬಾಗಿಲು ಮುಚ್ಚಿ, ಒಂದು ಸಣ್ಣ ಹಣತೆ ಹತ್ತಿಸಿಕೊಂಡು ಲೆಕ್ಕ ಬರೆಯುತ್ತಿದ್ದ.

ಒಳಗೆ ಯಾರೋ ಬಂದ ಹಾಗಾದುದನ್ನು ಕಂಡು ಸವರ್‌ಬೆರಿ ಲೆಕ್ಕದ ಪುಸ್ತಕದಿಂದ ತಲೆಯೆತ್ತಿ, "ಯಾರದು? ಬಂಬಲ್ ಏನು?" ಎಂದ.

"ಆಹಾ! ಅವನೇ! ಇನ್ಯಾರು?" ಎಂದು ಹೇಳಿ, ಬಂಬಲ್ "ಜೊತೆಗೆ ಯಾರು ಬಂದಿದ್ದಾರೆ, ನೋಡು" ಎಂದ.

ಬಂಬಲನ ಸೂಚನೆಯ ಮೇರೆ ಆಲಿವರ್ ಸವರ್‌ಬೆರಿಗೆ ನಮಸ್ಕಾರ ಮಾಡಿದ.

ಸವರ್‌ಬೆರಿ ತನ್ನ ಮುಂದಿದ್ದ ಹಣತೆಯನ್ನು ಮೇಲೆತ್ತಿ ಹಿಡಿದು, ಅದರ ಬೆಳಕಿನಲ್ಲಿ ಆಲಿವರನನ್ನು ಕಂಡು, "ಓಹೋ, ಇವನೇಯೋ ಹುಡುಗ?" ಎಂದು ಹೇಳಿ, ಒಳಗಿದ್ದ ತನ್ನ ಹೆಂಡತಿಯನ್ನು ಕುರಿತು "ಇಲ್ಲಿ ಬಾ, ಈ ಹುಡುಗನನ್ನು ನೋಡು, ಬಾ" ಎಂದು ಕರೆದ.

ಅವನ ಹೆಂಡತಿ ಬಂದು ಆಲಿವರನನ್ನು ನೋಡಿದಳು. "ಇವನೇನೇ ಹುಡುಗ? ಇದೇನು, ಇಷ್ಟು ಪೀಚುಪೀಚಾಗಿದ್ದಾನೆ?" ಎಂದಳು.

ಆಲಿವರ್ ಅಷ್ಟು ಪೀಚಾಗಿರುವುದು ತನ್ನ ತಪ್ಪು ಎಂಬಂತೆ ಬಂಬಲ್ ತಲೆ ತಗ್ಗಿಸಿ, "ನಿಜವೇ, ಹುಡುಗ ಸ್ವಲ್ಪ ಬೆಳೆವಣಿಗೆ ಸಾಲದು. ಆದರೇನು? ಸ್ವಲ್ಪ ದಿವಸ ಆದರೆ ತಾನೇ ಬೆಳೆಯುತ್ತಾನೆ" ಎಂದನು.

ಅದಕ್ಕೆ ಆ ಸವರ್ಬೆರಿ ಹೆಂಡತಿ ಬೆಕ್ಕಿನಹಾಗೆ ಸಿಠ್ರೆನ್ನುತ್ತಾ "ಹೌದು, ಹೌದು. ಬೆಳೆಯುತ್ತಾನೆ. ನಮ್ಮ ಮನೆಯ ರೊಟ್ಟಿ, ನೀರು ತಿಂದೂ ತಿಂದೂ ಬೆಳೆಯುತ್ತಾನೆ. ಈ ಅನಾಥಾಲಯದ ಹುಡುಗರನ್ನು ಕಟ್ಟಿ ಕೊಂಡರೇ ಹೀಗೆ. ಒಂದು ಕಾಸು ದುಡಿದರೆ ಹತ್ತು ಕಾಸು ತಿನ್ನುತ್ತಾರೆ. ಗಂಡಸರಿಗೆ ಇದೆಲ್ಲಾ ಏನು ಗೊತ್ತು" ಎಂದು ಗೊಣಗಿ, ಆಲಿವರನನ್ನು

ಕುರಿತು "ಶುದ್ಧ ಮೂಳೆ ಚಕ್ಕಳ! ಇಲ್ಲೇನು ನಿಂತಿದ್ದೀ. ತೊಲಗು" ಎಂದು ಪಕ್ಕದಲ್ಲಿ ಒಂದು ಸಣ್ಣ ಬಾಗಿಲು ತೆಗೆದಳು.

ಬಾಗಿಲಿನ ಆಚೆ ಒಂದಷ್ಟು ಮೆಟ್ಟಲು ಇಳಿದುಹೋದರೆ ಅಲ್ಲೇ ಅವರ ಅಡುಗೆಯ ಮನೆ. ಅಲ್ಲಿ ಒಂದು ಹುಡುಗಿ ಪರಕಲುಪರಕಲಾಗಿ ಕುಳಿತಿದ್ದಳು. ಅವಳ ಬಟ್ಟೆಯೆಲ್ಲ ಕೊಳಕು. ಕಾಲುಚೀಲವೆಲ್ಲ ಹರಿದು ಹೋಗಿತ್ತು. ಅವಳ ಹೆಸರು ಛಾರ್ಲೆಟ್.

ಸವರ್‌ಬೆರಿ ಹೆಂಡತಿ ಆಲಿವರನನ್ನು ಮೆಟ್ಟಲುಗಳಿಂದ ಕೆಳಕ್ಕೆ ನೂಕಿ "ಛಾರ್ಲೆಟ್, ಆ ನಾಯಿಗೆ ಎಂದು ಇಟ್ಟದ್ದೆವಲ್ಲ, ಆ ಚೂರುಪಾರುಗಳನ್ನು ಈ ಹುಡುಗನಿಗೆ ಕೊಡು, ತಿನ್ನಲಿ." ಎಂದು ಕೂಗಿ, "ಏನೋ ಹುಡುಗ? ನಾಯಿಗೆ ಎಂದು ಇಟ್ಟದ್ದು. ಬೇಕೋ ಬೇಡವೋ?" ಎಂದಳು.

ನಾಯಿಗೆ ಎಂದು ಇಟ್ಟಿದ್ದನ್ನು ಆಲಿವರ್ ನೋಡಿದ. ಅದರಲ್ಲಿದ್ದ ಮಾಂಸದ ಚೂರುಗಳನ್ನು ಕಂಡು ಅವನ ಬಾಯಲ್ಲಿ ನೀರೂರಿತು.

"ತಿನ್ನುತ್ತೇನೆ" ಎಂದ. ತಟ್ಟೆಯನ್ನು ತಂದು ಎದುರಿಗೆ ಇಟ್ಟರೆ, ಒಂದು ಚೂರನ್ನೂ ಬಿಡದ ಹಾಗೆ ಗಬಗಬನೆ ತಿಂದುಹಾಕಿಬಿಟ್ಟ.

"ಅಬ್ಬಬ್ಬಾ! ಹೀಗೂ ಉಂಟೆ?" ಎಂದು ಸವರ್‌ಬೆರಿ ಹೆಂಡತಿ ಅವನು ತಿನ್ನುವುದನ್ನು ಕಂಡು ದಿಗುಲುಬಿದ್ದು, "ಆಯಿತೋ ಇಲ್ಲವೋ?" ಎಂದಳು.

ತಿನ್ನುವುದಕ್ಕೆ ಇನ್ನೇನೂ ಹತ್ತಿರ ಕಾಣಲಿಲ್ಲವಾದ್ದರಿಂದ ಆಲಿವರ್ 'ಆಯಿತು' ಎಂದ.

"ಹಾಗಾದರೆ ನನ್ನ ಹಿಂದೆ ಬಾ" ಎಂದು ಅವಳು ಒಂದು ಮಸಿ ಹಿಡಿದ ಮಂಕುದೀಪವನ್ನು ಕೈಲೆತ್ತಿಕೊಂಡು, "ಬಾ, ಮೇಲಕ್ಕೆ ಹೋಗೋಣ. ಅಲ್ಲಿ ಆ ಮೇಜಿನ ಕೆಳಗೆ ನೀನು ಮಲಗುವ ಸ್ಥಳ. ಹೆಣಗಳನ್ನು ಹೂಳುವ ಪೆಟ್ಟಿಗೆಗಳು ಸುತ್ತಲೂ ಇದ್ದರೆ ನಿನಗೇನೂ ಬಾಧಕವಿಲ್ಲ. ಬಾಧಕವಿದ್ದರೂ ಅಲ್ಲೇ ಮಲಗಬೇಕು. ಮಲಗಲು ಬೇರೆ

ಎಲ್ಲೂ ಸ್ಥಳವಿಲ್ಲ. ಬಾ, ಬಾ, ನಿನಗಾಗಿ ಎಷ್ಟು ಹೊತ್ತು ಕಾದಿರಬೇಕು" ಎಂದು ಕೂಗಿದಳು.

ಆಲಿವರ್ ಮೇಲೆ ಹತ್ತಿ ಹೋದ. ಮನೆಯವಳು ಬಿಟ್ಟು ಹೋದ ಆ ಮಸಿದೀಪದ ಮಂಕು ಬೆಳಕಿನಲ್ಲಿ ಸುತ್ತಲೂ ನೋಡಿದ. ಸುತ್ತ ಎಲ್ಲಿ ನೋಡಿದರೂ ಹೆಣಗಳನ್ನು ಹೂಳುವ ಪೆಟ್ಟಿಗೆಗಳು. ತಾನು ಮಲಗಿಕೊಳ್ಳ ಬೇಕೆಂದು ಅವಳು ತೋರಿಸಿದ ಸ್ಥಳ ಕೂಡ ಹೆಣವನ್ನು ಹೂಳುವ ಹಳ್ಳದಂತಿತ್ತು.

ಆಲಿವರ್ ಬೆದರುತ್ತಲೇ ಹೆದರುತ್ತಲೇ ಹಾಗೇ ಮೇಜಿನ ಕೆಳಗೆ ಮುದುರಿಕೊಂಡ. ಯಾವುದೋ ಮಾಯದಲ್ಲಿ ಹಾಗೇ ಸ್ವಲ್ಪಸ್ವಲ್ಪವಾಗಿ ಕಣ್ಣು ಮುಚ್ಚಿಕೊಂಡು ನಿದ್ರೆ ಬಂದುಬಿಟ್ಟಿತು.

## ಆಲಿವರನ ಅಭಿಮಾನ

ಬೆಳಗ್ಗೆ ಯಾರೋ ಅಂಗಡಿಯ ಬಾಗಿಲನ್ನು ಕಾಲಿನಿಂದ ಒದ್ದು ಕೈಗಳಿಂದ ಗುದ್ದಿದಾಗಲೆ ಆಲಿವರನಿಗೆ ಎಚ್ಚರವಾದದ್ದು. ಅವನು ಎದ್ದು, ತನ್ನ ಬಟ್ಟೆಗಳನ್ನು ಹಾಕಿಕೊಳ್ಳುವುದರೊಳಗಾಗಿ ಒದೆಯುವುದೂ ಗುದ್ದುವುದೂ ಇನ್ನೂ ಹೆಚ್ಚಾಯಿತು.

ಆಲಿವರನು ಬಾಗಿಲ ಹತ್ತಿರ ಬಂದ ಶಬ್ದ ಕೇಳಿ ಆ ಗುದ್ದುತ್ತಿದ್ದುದೂ ಒದೆಯುತ್ತಿದ್ದುದೂ ನಿಂತಿತು.

"ಬಾಗಿಲು ತೆಗೆಯುತ್ತೀಯೊ? ಇಲ್ಲವೊ?" ಎಂದು ಆ ಒದೆದು ಗುದ್ದುತ್ತಿದ್ದ ವ್ಯಕ್ತಿ ಕೂಗಿತು.

"ಇದೋ, ತೆಗೆದೆ." ಎಂದು ಆಲಿವರ್ ಬಾಗಿಲಿಗೆ ಹಾಕಿದ್ದ ಬೀಗ ವನ್ನು ತೆಗೆಯಲು ಕತ್ತಲೆಯಲ್ಲಿ ತಡಕುತ್ತಿದ್ದ.

"ಯಾರು, ನೀನೇಯೋ ಹೊಸ ಹುಡುಗ?" ಎಂದು ಆ ವ್ಯಕ್ತಿ ಬಾಗಿಲ ಕಂಡಿಯಿಂದ ಇಣಿಕಿತು.

"ಹೌದು, ನಾನೇ."

"ನಿನಗೆ ಎಷ್ಟೋ ವಯಸ್ಸು?"

"ಹತ್ತು."

"ಹತ್ತೆ? ಬಾಗಿಲು ತೆಗೆ, ಬಂದು ಮಾಡುತ್ತೇನೆ. ಅರ್ಧಗಂಟೆ ಯಿಂದ ನನ್ನನ್ನು ಇಲ್ಲಿ ಕಾಯಿಸಿದ್ದೀಯಾ ನೀನು? ಅನಾಥಾಲಯದ ಅನ್ನ ತಿಂದು ನಿನಗೆ ಕೊಬ್ಬು."

ಆಲಿವರ್ ಮುಂದೆ ಏನಾಗುವುದೋ ಎಂದು ಬೆದರುತ್ತ ಬೀಗವನ್ನು ತಿರುಗಿಸಿ, ಬಾಗಿಲನ್ನು ತೆಗೆದ. ಯಾರೂ ಕಾಣಲಿಲ್ಲ. ದಾರಿಯ ಉದ್ದಕ್ಕೂ ಆಚೆ ಈಚೆ ನೋಡಿದ. ಯಾರೂ ಕಾಣಲಿಲ್ಲ. ಆದರೆ ಅಂಗಡಿಯ ಮೆಟ್ಟಲಿನ ಮೇಲೆ ಒಬ್ಬ ಹುಡುಗ ಕುಳಿತುಕೊಂಡು, ಒಂದು ಚೂರು ರೊಟ್ಟಿಗೆ ಬೆಣ್ಣೆ ಸವರಿಕೊಂಡು ತಿನ್ನುತ್ತಾ ಕುಳಿತಿದ್ದ.

ಆಲಿವರ್ ಅವನನ್ನು ಕುರಿತು "ಏನಪ್ಪಾ, ಇಲ್ಲಿ ಯಾರೋ ಬಾಗಿಲು ತಟ್ಟಿದರು. ಯಾರು? ನೀನೇ?" ಎಂದ.

ಆ ಹುಡುಗ "ನಾನೇ. ತಟ್ಟಲಿಲ್ಲ, ಒದ್ದೆ" ಎಂದ.

"ಏನು ಬೇಕಾಗಿತ್ತು ನಿನಗೆ? ಹೆಣ ಹೂಳುವ ಪೆಟ್ಟಿಗೆ ಏನಾದರೂ ಬೇಕೇನು?" ಎಂದು, ಪಾಪ, ಆಲಿವರ್ ಏನೂ ಅರಿಯದೆ ಕೇಳಿದ.

ಅಷ್ಟಕ್ಕೇ ಆ ಹುಡುಗ ಉರಿದುಬೀಳುತ್ತ, "ಏನಂದೆ? ಬಾಯಿಗೆ ಬಂದ ಹಾಗೆ ಬಗಳಿದರೆ, ನಿನಗೇ ಒಂದು ಹೆಣದ ಪೆಟ್ಟಿಗೆ ಬೇಕಾಗುತ್ತೆ" ಎಂದು ಎದ್ದುಬಂದು, ಆಲಿವರನ ಎದುರಿಗೆ ನಿಂತು, "ನಾನು ಯಾರು, ಗೊತ್ತೇನೋ ನಿನಗೆ?" ಎಂದ.

ಆಲಿವರ್ ಅವನು ಯಾರೆಂದು ತಿಳಿಯದೆ ಸುಮ್ಮನೆ ಮುಖ ಮುಖ ನೋಡಿದಾಗ ಅವನು "ನಾನು ನೋಹಾ ಕ್ಲೇಪೋಲ್ ಕಣೋ" ಎಂದು ಹೇಳಿ, "ದೊಡ್ಡವರು ಮಾತನಾಡುತ್ತಾ ಇದ್ದರೆ ಕೆಲಸವಿಲ್ಲದೆ ನಿಂತಿದ್ದೀಯಾ? ಕತ್ತೆ! ಕಿಟಕಿಗಳನ್ನು ತೆಗೆ ಹೋಗು" ಎಂದು ಇದ್ದಕ್ಕಿದ್ದ

ಹಾಗೆಯೇ ಆಲಿವರನನ್ನು ಒಂದು ಸಲ ಒದ್ದು, ಅಂಗಡಿಯ ಒಳಕ್ಕೆ ಹೋದನು.

ಆಲಿವರ್ ಕಿಟಕಿಗಳನ್ನು ತೆಗೆಯಲು ಹೋದ. ತೆಗೆಯುವ ಗಾಬರಿಯಲ್ಲಿ ಒಂದೆರಡು ಗಾಜು ಒಡೆದ. "ಒಡೆದ ಗಾಜನ್ನು ಬಂದು ನೋಡಲಿ, ಸವರ್‌ಬೆರಿ. ಅಪ್ಪನಿಗೆ ಪೂಜೆ ಆಗುತ್ತದೆ" ಎಂದು ನೋಹ ಮೊದಲೇ ಹೆದರುತ್ತಿದ್ದ ಆಲಿವರನನ್ನು ಇನ್ನೂ ಹೆದರಿಸಿದ.

ಅವನು ಕೊಟ್ಟ ಭರವಸೆ ತಪ್ಪಾಗಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಸವರ್‌ಬೆರಿ ಅಂಗಡಿಗೆ ಬಂದ. ಒಡೆದ ಗಾಜನ್ನು ನೋಡಿದ. ನೋಹ ಹೇಳಿದ ಹಾಗೆಯೇ ಆಲಿವರನಿಗೆ ಚೆನ್ನಾಗಿ ಪೂಜೆಯಾಯಿತು.

ಆಲಿವರ್ ಮೈ ಮುಟ್ಟಿಕೊಳ್ಳುತ್ತ ಕಣ್ಣೊರಸಿಕೊಳ್ಳುತ್ತ ನೋಹನ ಹಿಂದೆ ಬೆಳಗಿನ ಊಟಕ್ಕಾಗಿ ಅಡುಗೆಯ ಮನೆಗೆ ಹೋದ.

ಅಲ್ಲಿ ಛಾರ್ಲೆಟ್ ನೋಹನಿಗೆ ಒಲೆಯ ಹತ್ತಿರ ಕುಳಿತುಕೊಳ್ಳಲು ಸ್ಥಳ ಮಾಡಿಕೊಟ್ಟು, ಹಿಂದಿನ ರಾತ್ರೆ ತಾನು ತೆಗೆದು ಮುಚ್ಚಿಟ್ಟಿದ್ದ ಹಂದಿಯ ಮಾಂಸದ ತುಂಡನ್ನು ಅವನಿಗೆ ಕೊಟ್ಟಳು. ಆಲಿವರ್ ಕೈಯಲ್ಲಿ ಯಾವುದೋ ಚೂರುಪಾರು ಎಸೆದು, "ಆ ಬಾಗಿಲು ಮುಚ್ಚಿಬಿಟ್ಟು, ಆ ಮೂಲೆಯಲ್ಲಿ ಕುಕ್ಕರಿಸಿಕೊಂಡು, ಬೇಗ ತಿಂದುಬಿಟ್ಟು ಹೋಗು. ಅಂಗಡಿಯಲ್ಲಿ ಯಾರೂ ಇಲ್ಲ" ಎಂದಳು.

ನೋಹಾ "ಹೇಳಿದ್ದು ಕೇಳಿಸಿತೇನೋ ತಬ್ಬಲಿ" ಎಂದು ಕೂಗಿದ.

ಆಲಿವರ್ ಏನೂ ಕೇಳಿಸದವನ ಹಾಗೆ ಮಾತನಾಡದೆ ಎದ್ದುಹೋಗಿ, ಛಾರ್ಲೆಟ್ ತೋರಿಸಿದ ಮೂಲೆಯಲ್ಲಿ ಕುಳಿತುಕೊಂಡು ಅವಳು ತನಗೆ ಎಸೆದ ತಂಗಳು ಚೂರುಗಳನ್ನು ತಿಂದು ಮುಗಿಸಿದ.

ಹೀಗೇ ಕೆಲವು ತಿಂಗಳುಗಳು ಕಳೆದುವು. ಆ ಕಾಲದಲ್ಲಿ ಎಷ್ಟೋ ಜನ ಆ ಊರಲ್ಲಿ ಸತ್ತರು. ಪ್ರತಿಯೊಂದು ಹೆಣವನ್ನು ಸಾಗಿಸುವಾಗಲೂ

ಸವರ್‌ಬೆರಿ ಅದರ ಹಿಂದೆ ಹೋಗಬೇಕಾಗಿತ್ತು. ಅವನ ಜೊತೆಯಲ್ಲಿ ಆಲಿವರ್ ಕೂಡ ಪ್ರತಿಸಲವೂ ಸಮಾಧಿಸ್ಥಾನಕ್ಕೆ ಹೋಗಬೇಕಾಗಿತ್ತು.

ಇತ್ತ ಮನೆಯಲ್ಲಿಯಾದರೂ ಅವನಿಗೆ ಸುಖವಿರಲಿಲ್ಲ. ನೋಹ ಕ್ಲೇಪೋಲ್ ಅವನನ್ನು ತುಂಬ ಪೀಡಿಸುತ್ತಿದ್ದ. ಛಾರ್ಲೆಟ್ ಎದುರಿಗೆ ತನ್ನ ಪೌರುಷವನ್ನು ಪ್ರದರ್ಶಿಸಬೇಕು ಎಂದು ಕಾರಣವೇ ಇಲ್ಲದೆ ಆಲಿವರನನ್ನು ಬೈಯುತ್ತಿದ್ದ, ಬಡಿಯುತ್ತಿದ್ದ. ನೋಹ ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ಛಾರ್ಲೆಟ್ ಅನುಸರಿಸುವಳು. ಸವರ್‌ಬೆರಿ ಮಾತ್ರ ಆಗಾಗ್ಗೆ ಆಲಿವರನನ್ನು ಸ್ನೇಹದಿಂದ ಮಾತನಾಡಿಸುವನು. ಆದರೆ ಅವನು ಹಾಗೆ ಸ್ನೇಹದಿಂದ ನುಡಿಸುವನೆಂದೇ ಅವನ ಹೆಂಡತಿ ಆಲಿವರ ನನ್ನು ಕಂಡರೆ ಸಿಡುಕುವಳು. ಹೀಗೆ ತನಗೆ ಆದವನು ಒಬ್ಬ, ಆಗದವರು ಮೂರು ಜನ, ಇದರ ಜೊತೆಗೆ ಆಗಾಗ್ಗೆ ಹೆಣಗಳ ಮೆರವಣಿಗೆ—ಈ ಎಲ್ಲದರ ನಡುವೆ, ಪಾಪ, ಆಲಿವರ್ ಹಣ್ಣಾಗಿಹೋದ.

ಹೀಗೆ ಇರುವಾಗ ಒಂದು ದಿನ ಆಲಿವರ್ ಮತ್ತು ನೋಹ ಕೆಳಗೆ ಅಡುಗೆಯ ಮನೆಯಲ್ಲಿ ಊಟಕ್ಕೆ ಕುಳಿತಿದ್ದಾರೆ. ಛಾರ್ಲೆಟ್ ಬಡಿಸು ವುದಕ್ಕೆ ಸಿದ್ಧವಾಗುತ್ತಿದ್ದಾಳೆ. ಈ ಮಧ್ಯೆ ನೋಹ, ಸುಮ್ಮನೆ ಕುಳಿತಿರ ಲಾರದೆ, ಆಲಿವರನನ್ನು ಗೋಳುಗುಟ್ಟಿಸಬೇಕೆಂದು ಆಲಿವರನ ತಲೆ ಗೂದಲು ಹಿಡಿದು ಎಳೆದ; ಅವನ ಕಿವಿ ಹಿಡಿದು ಹಿಂಡಿದ; ಮೂಗು ತಿರುಚಿದ; ಅವನ ತೊಡೆಯ ಮೇಲೆ ಕಾಲು ಚಾಚಿ ನೀಡಿದ. ಏನೇ ಮಾಡಿದರೂ ಆಲಿವರ್ ಕಂ ಕಿಂ ಎನ್ನದೆ ಸುಮ್ಮನಿದ್ದ. ನೋಹ ಅವನನ್ನು ನೋಡಿ ಅವನ ಕಡೆ ಉಗಿದು, "ಥೂ! ಅಂಜುಬುರುಕ" ಎಂದ.

ಅದಕ್ಕೂ ಆಲಿವರ್ ಮಾತನಾಡದೆ ಮೌನವಾಗಿದ್ದ.

"ಏ ತಬ್ಬಲಿ! ಹೇಗಿದ್ದಾಳೊ ನಿನ್ನ ಅಮ್ಮ?" ಎಂದು ನೋಹ ಕೇಳಿದ.

"ಆಕೆ ತೀರಿಕೊಂಡಿದ್ದಾಳೆ. ನೀನು ಅವಳ ಸುದ್ದಿ ಮಾತ್ರ ಎತ್ತಬೇಡ."

"ಇಷ್ಟು ಬೇಗ ತೀರಿಕೊಳ್ಳುವುದಕ್ಕೆ ಅವಳಿಗೆ ಏನಾಗಿತ್ತೊ, ತಬ್ಬಲಿ?"

"ಏನೋ ಜೀವನದಲ್ಲಿ ಜುಗುಪ್ಸೆ ಬಂದು ಆಕೆ ತೀರಿಕೊಂಡಳಂತೆ. ಪಾಪ, ಅವಳಿಗೆ ಜೀವನ ಎಷ್ಟು ರೋಸಿಹೋಗಿರಬೇಕೆಂಬುದು ನನಗೆ ಈಗ ಅರ್ಥವಾಗುತ್ತದೆ" ಎಂದು ಹೇಳುತ್ತ ಇರುವಾಗಲೇ ಆಲಿವರನ ಕಣ್ಣುಗಳಲ್ಲಿ ನೀರು ತುಂಬಿಕೊಂಡು, ಕೆನ್ನೆಗಳ ಮೇಲೆ ಹರಿಯ ತೊಡಗಿತು.

ನೋಹ "ಎಲಾ ಎಲಾ ಎಲಾ! ಇದೇನೋ ಇದು, ತಬ್ಬಲಿ? ಹೀಗೆ ಗೋಳಾಡುವುದಕ್ಕೆ ಮೊದಲುಮಾಡಿದೆ?" ಎಂದ.

ಆಲಿವರ್ "ನಿನಗೇನು ಅದು ಕಟ್ಟಿಕೊಂಡು?" ಎಂದ.

ನೋಹ "ನನಗೆ ಏನೆ?" ಎಂದ.

"ಹೌದು ನಿನಗೇ. ಪುನಃ ನನ್ನ ತಾಯಿಯ ಸುದ್ದಿ ಏನಾದರೂ ಎತ್ತೀಯೆ?" ಎಂದ, ಆಲಿವರ್.

"ನಿನ್ನ ತಾಯಿಯ ಸುದ್ದಿಯೆ! ನನಗೇಕೆ? ಅವಳು ಸತ್ತದ್ದು ಬಹಳ ಒಳ್ಳೆಯದಾಯಿತು. ಥು, ದರಿದ್ರದವಳು, ತುಂಬ ದುಷ್ಟ ಜಾತಿ!"

ಆಲಿವರ್ ತಟ್ಟನೆ ಕೆರಳಿ, "ಏನೆಂದೆ?" ಎಂದ.

ನೋಹನ ಕಣ್ಣಿಗೆ ಆಲಿವರ್ ಕೆರಳಿದ್ದು ಕಾಣಿಸಲಿಲ್ಲ. "ದರಿದ್ರ ದವಳು, ದುಷ್ಟ ಜಾತಿ, ಎಂದೆ. ಅವಳು ಸತ್ತದ್ದು ಮೇಲಾಯಿತು ಎಂದೆ. ಅದಕ್ಕೆ ಏಕೆ ಗೋಳಾಡಬೇಕು, ಎಂದೆ" ಎಂದ.

ಆಲಿವರ್ ಕೋಪದಿಂದ ಕಣ್ಣು ಕಾಣದೆ ಎದ್ದ. ಕುರ್ಚಿ ಮೇಜು ಗಳನ್ನು ಕಿತ್ತು ಒಂದು ಪಕ್ಕಕ್ಕೆ ಎಸೆದ. ನೋಹನ ಕುತ್ತಿಗೆಗೆ ಕೈಹಾಕಿ ಹಿಡಿದು, ಅವನನ್ನು ಒದರಿ, ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ

ಬಲಗೈ ಮುಷ್ಟಿಯಿಂದ ನೋಹನ ತಲೆಯ ಮೇಲೆ ಒಂದು ಗುದ್ದು ಗುದ್ದಿದ. ನೋಹ ಕೆಳಗೆ ಉರುಳಿದ.



"ಆಲಿವರ್ ನೋಹನನ್ನು ಕೆಡವಿದ"

ನೋಹ ಇದನ್ನು ನಿರೀಕ್ಷಿಸಿರಲಿಲ್ಲ. ಈಗ ಒಂದು ಗಳಿಗೆಯ ಹಿಂದೆ ಏನೂ ತಿಳಿಯದವನಂತೆ ಕುಳಿತಿದ್ದ ಆಲಿವರ್ ಮರುಕ್ಷಣದಲ್ಲಿ ಹೀಗೆ ಕೆಂಡ

ವಾಗುವನೆಂದು ನೋಹ ನಿರೀಕ್ಷಿಸಿರಲಿಲ್ಲ. ಆದರೆ ಎಂತಹ ಬಲಹೀನ ನಾದರೂ, ಅವನ ಸಹನೆಗೂ ಮಿತಿಯಿಲ್ಲವೆ? ಹಾಗೆಯೇ ಆಲಿವರನ ಸಹನೆಯೂ ಮಿತಮೀರಿತು. ನೋಹ ತನ್ನನ್ನು ಹಿಂಸಿಸಿದ್ದೂ ಹಂಗಿಸಿದ್ದೂ ಅವನ ಮನಸ್ಸನ್ನು ಅಷ್ಟು ಬಾಧಿಸಲಿಲ್ಲ. ಆದರೆ ತನ್ನ ತಾಯಿಯನ್ನು ಕುರಿತು ಅವನು ಲಘುವಾಗಿ ಮಾತನಾಡಿದುದರಿಂದ ಅವನ ತಾಳ್ಮೆ ತಪ್ಪಿತು. ರಕ್ತನಾಳಗಳಲ್ಲಿ ಬೆಂಕಿ ಪ್ರವಹಿಸಿದ ಹಾಗಾಯಿತು. ಮೈಯಲ್ಲಿ ಏನೋ ಒಂದು ಅಪೂರ್ವವಾದ ಹೊಸ ಸಾಮರ್ಥ್ಯದ ಸಂಚಾರವಾಯಿತು. ಒಡನೆಯೆ ಆಲಿವರ್ ಮೇಲೆದ್ದು, ನೋಹ ಸಿದ್ಧನಾಗುವುದಕ್ಕೆ ಮೊದಲೇ ಅವನ ಮೇಲೆ ಬಿದ್ದು, ಅವನನ್ನು ಹೊಡೆದು ಕೆಳಕ್ಕೆ ಕೆಡವಿ ಬಿಟ್ಟನು.

ನೋಹ ಮಾತನಾಡುವುದರಲ್ಲಿ ಎಷ್ಟು ಧೈರ್ಯ ತೋರಿಸುತ್ತಿದ್ದನೋ ಈಗ ಅಷ್ಟೂ ಅಷ್ಟು ಹೇಡಿಯಾದ. ತನ್ನನ್ನು ಕೆಳಗೆ ಬೀಳಿಸಿ, "ಏಳು, ನಿನಗೆ ಮಾಡುತ್ತೇನೆ" ಎಂಬಂತೆ ತನ್ನ ಮೇಲೆ ನಿಂತಿದ್ದ ಆಲಿವರನನ್ನು ಕಂಡು ನೋಹ, ಜೀವಭಯದಿಂದ "ಛಾರ್ಲೆಟ್! ಛಾರ್ಲೆಟ್! ಈ ಹುಡುಗ ನನ್ನನ್ನು ಕೊಂದುಬಿಡುತ್ತಾನೆ!" ಎಂದು ಕಿರಿಚಿಕೊಂಡ. "ಅಮ್ಮಾ! ಅಮ್ಮಾ!" ಎಂದು ಸವರ್‌ಬೆರಿಯ ಹೆಂಡತಿಯನ್ನೂ ಕೂಗಿ ಕೊಂಡು, "ಅಯ್ಯೋ! ಆಲಿವರನಿಗೆ ಹುಚ್ಚು ಹಿಡಿದಿದೆ!" ಎಂದು ಅರಿಚಿದ.

ಅವನ ಕೂಗು ಕೇಳಿ ಪಕ್ಕದ ಬಾಗಿಲು ತೆಗೆದುಕೊಂಡು ಛಾರ್ಲೆಟ್ ಬಂದಳು. ಮೆಟ್ಟಿಲು ಇಳಿದು ಸವರ್‌ಬೆರಿ ಹೆಂಡತಿ ದಡದಡನೆ ಬಂದಳು.

"ಅಯ್ಯೋ ಪಾಪಿ! ತಿಂದು ತಿಂದು ಕೊಬ್ಬಿ, ಇದೇನೇ ನೀನು ಮಾಡುವ ಕೆಲಸ?" ಎಂದು ಛಾರ್ಲೆಟ್ ಬಲಗೈಯನ್ನು ಮುಷ್ಟಿ ಮಾಡಿ ಆಲಿವರನಿಗೆ ಒಂದು ಬಿಗಿದಳು. ಅಡಿಗೆಯ ಮನೆಯ ಪಾತ್ರೆಗಳನ್ನು

ಎತ್ತಿ ಎತ್ತಿ ಕುಕ್ಕಿ ಅವಳ ರಟ್ಟೆ ಬಲವಾಗಿತ್ತು. ಅಂಥವಳ ರಟ್ಟೆಯ ಒಂದೇ ಏಟಿಗೆ ಆಲಿವರ್ ತತ್ತರಿಸಿದ.

ಸವರ್‌ಬೆರಿಯ ಹೆಂಡತಿಯೂ ಅದೇ ಸಮಯವೆಂದು ಆಲಿವರನ ಕಡೆಗೆ ನುಗ್ಗಿ ಒಂದು ಕೈಯಿಂದ ಅವನ ಸಣ್ಣ ಕೈಗಳನ್ನು ಬಿಗಿಯಾಗಿ ಹಿಡಿದು, ಇನ್ನೊಂದು ಕೈಯಿಂದ ಅವನನ್ನು ಬಡಿದು, ಗುದ್ದಿ, ಪರಚಿ, ಪಜೀತಿ ಮಾಡಿಬಿಟ್ಟಳು.

ಈ ಮಧ್ಯೆ, ಇದುವರೆಗೂ ಕೆಳಗೆ ಮುದುರಿಕೊಂಡು ಬಿದ್ದಿದ್ದ ನೋಹ ಮೇಲೆದ್ದ. ಆ ಇಬ್ಬರು ಹೆಂಗಸರ ಜೊತೆಗೆ ತಾನೂ ಸೇರಿಕೊಂಡು, ಆಲಿವರನನ್ನು ತಾನೂ ಗುದ್ದಿ, ಒದ್ದು, ಪರಚಿದ.

ಆಲಿವರ್ ಒಂಟಿಯಾದರೂ ಅವನ ಮೇಲೆ ಬಿದ್ದವರು ಮೂವರಾದರೂ ಎಷ್ಟುಹೊತ್ತು ಅವನನ್ನು ಜೆಜ್ಜಿಯಾರು? ಅವರಿಗೇ ಕಡೆಗೆ ಬೇಸರವಾಯಿತು, ಆಯಾಸವಾಯಿತು. ಆಗ ಅವರು ಆಲಿವರನನ್ನು ಹಿಡಿದು ಎಳೆದುಕೊಂಡು ಹೋಗಿ, ಆ ಮನೆಯ ನೆಲಮಾಳಿಗೆಯಲ್ಲಿ ಅವನನ್ನು ತಳ್ಳಿ ಕೂಡಿಹಾಕಿದರು.

ಆಲಿವರನಾದರೋ ಅವರ ಏಟುಗಳನ್ನು ತಿಂದುಕೊಂಡು ಸುಮ್ಮನೆ ನಿಂತಿರಲಿಲ್ಲ. ತಾನೂ ತನ್ನ ಕೈಲಾದ ಮಟ್ಟಿಗೆ ಅವರನ್ನು ಪ್ರತಿಯಾಗಿ ಒದ್ದು, ಗುದ್ದಿ, ಪರಚಿದ್ದ. ಈಗ ನೆಲಮಾಳಿಗೆಯಲ್ಲಿ ತಳ್ಳಿ ಕೂಡಿಬಿಡಲು, ಬಾಗಿಲು ಮುರಿದು ಬೀಳುವಹಾಗೆ ಅದನ್ನು ಮುಷ್ಟಿಗಳಿಂದ ಗುದ್ದಿದ, ಕಾಲುಗಳಿಂದ ಒದೆದ.

ಅವನು ಗುದ್ದಿ ಒದೆಯುತ್ತಿದ್ದುದನ್ನು ನೋಡಿ, ಬಾಗಿಲು ಯಾವ ಗಳಿಗೆಯಲ್ಲಿ ಮುರಿದುಬೀಳುವುದೋ ಎಂದು ಸವರ್‌ಬೆರಿ ಹೆಂಡತಿ ಹೆದರಿದಳು. ಸವರ್‌ಬೆರಿ ಮನೆಯಲ್ಲಿರಲಿಲ್ಲ. ಬೇರೆ ಯಾರೂ ಗಂಡಸರೂ ಇರಲಿಲ್ಲ. ಈ ಹುಡುಗನನ್ನು ಹೇಗೆ ಹಿಡಿದಿಡುವುದೋ ಅರ್ಥವಾಗಲಿಲ್ಲ.

ಯಾರಿಗೆ ಹೇಳಿಕಳುಹಿಸಬೇಕು? ಪೋಲೀಸಿನವರಿಗೆ ಹೇಳಿಕಳುಹಿಸ ಬಹುದಲ್ಲವೆ?

ಅಷ್ಟರಲ್ಲಿ, ಆಲಿವರನನ್ನು ಈ ಮನೆಗೆ ತಂದು ಸೇರಿಸಿಹೋದ ಬಂಬಲ್‌ನ ನೆನಪು ಸವರ್‌ಬೆರಿ ಹೆಂಡತಿಗೆ ಆಯಿತು.

"ನೋಹ! ಓಡಿಹೋಗಿ, ಬಂಬಲನಿಗೆ ಹೇಳು. ಆಲಿವರನಿಗೆ ಹುಚ್ಚು ಹಿಡಿದಿದೆ. ಅವನು ಮನೆಯವರನ್ನೆಲ್ಲ ಖೂನಿ ಮಾಡುತ್ತಿದ್ದಾನೆ. ಬೇಗ ಓಡಿ ಬರಬೇಕಂತೆ. ಎಂದು ಹೇಳು. ಓಡು" ಎಂದಳು.

ನೋಹನಿಗೆ ಎರಡನೆಯ ಸಲ ಹೇಳಬೇಕಾಗಿಯೇ ಇರಲಿಲ್ಲ. ಅವನು ಏಳುವುದು ಬೀಳುವುದು ಒಂದೂ ನೋಡದೆ, ಕುರುಡು ಗೂಳಿ ನುಗ್ಗಿದ ಹಾಗೆ ಬೀದಿಯ ಉದ್ದಕ್ಕೂ ಓಡಿದ.

ಹಾಗೇ ಒಂದೇ ಉಸುರಿಗೆ ಓಡಿಬಂದು, ಅನಾಥಾಲಯದ ಬಾಗಿಲ ಹತ್ತಿರ ಸುದಾರಿಸಿಕೊಂಡು, ಕಣ್ಣು ಹೊಸಗಿ ಕೆಂಪಗೆ ಮಾಡಿಕೊಂಡು, ದುಃಖದಿಂದ ಬಿಕ್ಕಿಬಿಕ್ಕಿ ಅಳುವಂತೆ ನಟಿಸುತ್ತ, "ಮಿಸ್ಟರ್ ಬಂಬಲ್! ಮಿಸ್ಟರ್ ಬಂಬಲ್!" ಎಂದು ಭಯಗೊಂಡವನ ಹಾಗೆ ಕೂಗಿಕೊಂಡ.

ಅಲ್ಲೇ ಒಳಗೆ ಬಾಗಿಲ ಹತ್ತಿರ ಇದ್ದ ಬಂಬಲನ ಕಿವಿಗೆ ನೋಹನ ಕೂಗು ಮುಟ್ಟಿತು.

ಒಡನೆಯೇ ಬಂಬಲ್ ಬಾಗಿಲು ತೆಗೆದು, "ಏನು? ಯಾರು?" ಎಂದ.

"ನಾನು, ಮಿಸ್ಟರ್ ಬಂಬಲ್! ಆಲಿವರ್........ಆಲಿವರ್........" ಎಂದು ನೋಹ ಮೇಲುಸಿರು ಬಿಡುತ್ತ ಹೇಳಿದ.

ಬಂಬಲನ ಮುಖದಲ್ಲಿ ಸಂತೋಷ ತುಂಬಿ ತುಳುಕಿತು. "ಆಲಿವರ್ ಎಲ್ಲೋ ಹೇಳದೆ ಕೇಳದೆ ಓಡಿಹೋಗಿರಬೇಕು. ಸದ್ಯಃ ಪೀಡೆ ತೊಲಗಿತು!" ಎಂದುಕೊಂಡು, "ಏನು? ಏನು? ಆಲಿವರ್ ಓಡಿಹೋದನೆ, ನೋಹ?" ಎಂದು ಕೇಳಿದ.

ನೋಹ "ಇಲ್ಲ, ಇಲ್ಲ. ಓಡಿಹೋಗಲಿಲ್ಲ. ಅವನಿಗೆ ಹುಚ್ಚು ಹಿಡಿದಿದೆ. ಮೊದಲು ನನ್ನನ್ನು ಕೊಲ್ಲುವುದಕ್ಕೆ ಬಂದ. ಅನಂತರ ಛಾರ್ಲೆಟ್‌ಅನ್ನು ಕತ್ತರಿಸಿಬಿಡುತ್ತೇನೆ ಎಂದು ಹೋದ. ಕಡೆಗೆ ನಮ್ಮ ಯಜಮಾನಿತಿಯಾದ ಸವರ್‌ಬೆರಿಯ ಹೆಂಡತಿಯನ್ನೇ ಕೊಂದುಬಿಡು ತ್ತೇನೆ ಎಂದ. ನಾವೆಲ್ಲರೂ ಮಹಾ ಪ್ರಯತ್ನ ಮಾಡಿ ಅವನನ್ನು ಹೇಗೋ ಹಿಡಿದು ನೆಲಮಾಳಿಗೆಯಲ್ಲಿ ಹಾಕಿದ್ದೇವೆ. ನೀವು ಈಗಲೇ ಬರ ಬೇಕಂತೆ" ಎಂದ.

"ಏನೆಂದೆ, ನೋಹ? ಆಲಿವರ್ ನಿನ್ನನ್ನು ಕೊಲ್ಲಲು ಯತ್ನಿಸಿದನೆ? ಎಂದ ಬಂಬಲ್.

"ಹೌದು, ಸ್ವಾಮಿ. ಹಾಗೆಯೇ ಆ ಅಡುಗೆಯ ಹುಡುಗಿ ಛಾರ್ಲೆಟ್ ಅನ್ನೂ ಕೊಲ್ಲಲು ಯತ್ನಿಸಿದ."

"ಅವಳನ್ನೂ?"

"ನಮ್ಮ ಯಜಮಾನರ ಹೆಂಡತಿಯನ್ನೂ ಖೂನಿ ಮಾಡುವುದಾಗಿ ಹೆದರಿಸಿದ."

"ನಿನ್ನ ಯಜಮಾನರನ್ನೂ ಹೆದರಿಸಿದನೋ?"

"ಅವರು ಮನೆಯಲ್ಲಿ ಇರಲಿಲ್ಲ. ಇದ್ದಿದ್ದರೆ ಅವರನ್ನೂ ಕೊಲ್ಲು ವುದಾಗಿ ಹೆದರಿಸದೆ ಇರುತ್ತಿರಲಿಲ್ಲ."

"ಓಹೋ, ಹಾಗೋ! ಒಳ್ಳೆಯದು, ಬಾ. ಹೆದರಬೇಡ, ಬಾ. ನಾನು ಅವನನ್ನು ವಿಚಾರಿಸಿಕೊಳ್ಳುತ್ತೇನೆ" ಎಂದು ತನ್ನ ಟೋಪಿಯನ್ನು ತಲೆಗೆ ಸಿಕ್ಕಿಸಿಕೊಂಡು, ತನ್ನ ಬೆತ್ತವನ್ನು ಕಂಕುಳಿಗೆ ಸಿಕ್ಕಿಸಿಕೊಂಡು, ಬಂಬಲ್ ನೋಹನನ್ನೂ ಜೊತೆಯಲ್ಲಿ ಕರೆದುಕೊಂಡು ಸವರ್‌ಬೆರಿಯ ಮನೆಗೆ ಹೊರಟನು.

ಇತ್ತ ಸವರ್‌ಬೆರಿಯ ಮನೆಯಲ್ಲಿ ಆಲಿವರ್ ಇನ್ನೂ ನೆಲಮಾಳಿಗೆಯ ಬಾಗಿಲನ್ನು ಕುಟ್ಟಿ ಒದೆಯುತ್ತಲೇ ಇದ್ದ. ಸವರ್‌ಬೆರಿ ಮನೆಗೆ ಹಿಂದಿರು

ಗಿರಲಿಲ್ಲ. ಮನೆಯಾಕೆಯೂ ಅಡಿಗೆಯವಳೂ ಬಂಬಲನ ಬರುವಿಕೆಯನ್ನೇ ಎದುರುನೋಡುತ್ತ ಬೀದಿಯ ಬಾಗಿಲಿನಲ್ಲಿ ನಿಂತಿದ್ದರು.

ಬಂಬಲನೂ ನೋಹನೂ ಬೇಗಬೇಗ ಬಂದರು. ಸವರ್‌ಬೆರಿಯ ಹೆಂಡತಿ ಬಂಬಲನನ್ನು ನೆಲಮಾಳಿಗೆಯ ಬಾಗಿಲ ಹತ್ತಿರ ಕರೆದುಕೊಂಡು ಹೋದಳು.

ಬಂಬಲ್ ಒಂದು ಸಲ ಬಾಗಿಲನ್ನು ಕಾಲಿನಿಂದ ಒದ್ದ. ಬೀಗದ ಕಂಡಿಯಿಂದ ಇಣಿಕಿ ನೋಡಿದ. ಒಳಗೆ ಕತ್ತಲೆ, ಏನೂ ಕಾಣಿಸಲಿಲ್ಲ. ಆಗ ಬಂಬಲ್, ಕೇಳಿದರೆ ಭಯವಾಗುವಂತಹ ಗಡುಸಾದ ಧ್ವನಿಯಲ್ಲಿ "ಆಲಿವರ್!" ಎಂದು ಕರೆದ.

ಆಲಿವರ್ ನಿರ್ಭಯದಿಂದ "ಬಾಗಿಲು ತೆಗೆ. ಬಂದು ನೋಡು ತ್ತೇನೆ!" ಎಂದ.

ಬಂಬಲ್ ಬೆಚ್ಚಿದ. "ಆಲಿವರ್! ಮಾತಾಡುವವರು ಯಾರು, ನಿನಗೆ ಗೊತ್ತೊ?" ಎಂದ.

"ಓ, ಗೊತ್ತು!" ಎಂದ ಆಲಿವರ್.

"ಆಹಾ! ನನ್ನ ಧ್ವನಿ ಕೇಳಿ ನಿನಗೆ ದಿಗಿಲಾಗದೆ? ನನ್ನ ಹೆಸರು ಕೇಳಿ ನಿನಗೆ ಹೆದರಿಕೆಯಾಗದೆ?" ಎಂದು ಬಂಬಲ್ ಗರ್ಜಿಸಿದ.

ಆಲಿವರ್ ನಿರ್ಭೀತಿಯಿಂದ "ಇಲ್ಲ!" ಎಂದ.

ಅನಾಥಾಲಯದ ಯಾವ ಹುಡುಗನೂ ಇದುವರೆಗೆ ಬಂಬಲನಿಗೆ ಹೀಗೆ ಉತ್ತರ ಕೊಟ್ಟಿರಲಿಲ್ಲ. ಅದರಲ್ಲೂ ಆಲಿವರ್ ತನಗೆ ಈ ರೀತಿ ಎದುರುಮಾತು ಹೇಳುವನೆಂದು ಬಂಬಲ್ ಕನಸಿನಲ್ಲಿಯೂ ಎಣಿಸಿರಲಿಲ್ಲ. ಆದ್ದರಿಂದಲೇ ಆಲಿವರನ ಉತ್ತರ ಕೇಳಿದೊಡನೆ ಬಂಬಲ್‌ಗೆ ಕಪಾಲಕ್ಕೆ ಹೊಡೆದ ಹಾಗಾಯಿತು. ಬಾಗಿಲಿನಿಂದ ಎರಡು ಹೆಜ್ಜೆ ಹಿಮ್ಮೆಟ್ಟಿದ. ಮಂಕು ಮುಚ್ಚಿದವನ ಹಾಗೆ ಅಲ್ಲಿ ನಿಂತ ಮೂವರ ಮುಖಗಳನ್ನೂ ಸುಮ್ಮನೆ ನೋಡಿದ.

"ಅದೇ, ಮಿಸ್ಟರ್ ಬಂಬಲ್, ಅವನಿಗೆ ಖಂಡಿತ ಹುಚ್ಚು ಹಿಡಿದಿದೆ. ಇಲ್ಲದೆ ಇದ್ದರೆ, ಅವನ ಬುದ್ಧಿ ನೆಟ್ಟಗಿದ್ದಿದ್ದರೆ ನಿಮಗೆ ಈರೀತಿ ಎದುರು ಜವಾಬು ಹೇಳುವ ಧೈರ್ಯ ಎಲ್ಲಿ ಬರಬೇಕು?" ಎಂದು ಆ ಸವರ್ ಬೆರಿಯ ಹೆಂಡತಿ ಮಾತನಾಡಿದಾಗ ಬಂಬಲನಿಗೆ ಮಂಕುನಿದ್ರೆಯಿಂದ ಎಚ್ಚರವಾಯಿತು.

ಬಂಬಲ್ ಒಂದೆರಡು ನಿಮಿಷ ದೀರ್ಘವಾಗಿ ಆಲೋಚನೆ ಮಾಡಿ, "ಇದು ಹುಚ್ಚಲ್ಲ. ಇದು ಕೊಬ್ಬು! ಕೊಬ್ಬು!" ಎಂದು ಹೇಳಿದ.

"ಕೊಬ್ಬು ಅಂದರೆ?" ಎಂದು ಸವರ್‌ಬೆರಿ ಹೆಂಡತಿ ಕೇಳಿದಳು.

"ಕೊಬ್ಬು ಅಂದರೆ ಕೊಬ್ಬು! ಅರ್ಧಹೊಟ್ಟೆಗೆ ಗಂಜಿ ಕೂಡ ಕಾಣ ದಿದ್ದ ಭಿಕಾರಿಗಳಿಗೆಲ್ಲ ನೀವು ಮಾಂಸ, ರೊಟ್ಟಿ ತಿನ್ನಿಸುತ್ತ ಬಂದರೆ ಕೊಬ್ಬಲ್ಲದೆ ಮತ್ತೇನು! ನೀವು ಅವನಿಗೆ ಅತಿಯಾಗಿ ತಿನ್ನಿಸಿದ್ದೀರಿ. ಆದರಿಂದಲೇ ಈ ತೊಂದರೆ ಬಂದದ್ದು. ತಾಯಿ, ನೀವು ಅವನಿಗೆ ಬರಿಯ ತಿಳುಗಂಜಿ ಹುಯ್ಯುತ್ತಿದ್ದಿದ್ದರೆ ಈ ಸ್ಥಿತಿಗೆ ಬರುತ್ತಲೇ ಇರಲಿಲ್ಲ" ಎಂದ ಬಂಬಲ್.

"ಅಯ್ಯೋ, ಅಯ್ಯೋ, ಹೀಗೂ ಉಂಟೆ! ಏನೋ ಪಾಪ, ತಂದೆ ತಾಯಿಯಿಲ್ಲದ ತಬ್ಬಲಿ ಸುಖವಾಗಿರಲಿ, ಎಂದು ಮಿಕ್ಕವರಿಗೆಲ್ಲಾ ತಪ್ಪಿಸಿ, ಅದನ್ನು ಇವನಿಗೆ ತಿನ್ನಿಸಿದರೆ ಹೀಗೆ ಕೃತಘ್ನನಾಗುವುದೂ ಉಂಟೆ?" ಎಂದು ಸವರ್‌ಬೆರಿ ಆಶ್ಚರ್ಯಪಟ್ಟವಳಂತೆ ಕೈ ಬಾಯಿ ತಿರುಗಿಸುತ್ತ ಹೇಳಿದಳು. ನಾಯಿ ಕೂಡ ಮೂಗಿನಿಂದ ಮೂಸಿನೋಡದ ಹಳಸಿದ ತಂಗಳು ಚೂರುಗಳನ್ನು ತಾನು ಆಲಿವರನಿಗೆ ತಿನ್ನಿಸುತ್ತಿದ್ದೆನೆಂಬುದನ್ನು ಆಕೆ ಬಾಯಿಬಿಟ್ಟು ಹೇಳಲಿಲ್ಲ.

"ಸರಿ, ಹೋಗಲಿ. ಆದದ್ದು ಆಗಿಹೋಯಿತು. ಇನ್ನು ಮುಂದಾ ದರೂ ಸ್ವಲ್ಪ ಎಚ್ಚರಿಕೆಯಿಂದ ಇದ್ದರೆ ಕ್ಷೇಮ. ಇನ್ನೊಂದು ನಾಲ್ಕಾರು ದಿನ ಇವನನ್ನು ಇಲ್ಲೇ ಈ ನೆಲಮಾಳಿಗೆಯಲ್ಲಿಯೇ ಇರಲು ಬಿಡಿ. ಸ್ವಲ್ಪ

ಕೊಬ್ಬು ಕರಗಲಿ. ಆಮೇಲೆ ಇಲ್ಲಿ ಈ ಮನೆಯಲ್ಲಿ ಇರುವವರೆಗೂ ಬರಿಯ ಗಂಜಿ ಒಂದನ್ನೇ ಇವನ ಹೊಟ್ಟೆಗೆ ಹಾಕಿ. ಅದೂ ಮಿತಿ ಮೀರದಿರಲಿ. ದರಿದ್ರ, ಈ ಅನಾಥಾಲಯದ ತಬ್ಬಲಿಗಳ ಹಾಳು ಹುಟ್ಟೇ ಹೀಗೆ!"

ಹೀಗೆ ಬಂಬಲ್ ಸವರ್‌ಬೆರಿಯ ಹೆಂಡತಿಗೆ ಉಪದೇಶ ಮಾಡುತ್ತಿದ್ದ ಹೊತ್ತಿಗೆ ಸವರ್‌ಬೆರಿ ಮನೆಗೆ ಹಿಂದಿರುಗಿದ. ಏನಾಯಿತೆಂದು ವಿಚಾರಿಸಿದ. ನಡೆದುದು ಒಂದರ ಜೊತೆಗೆ ನಡೆಯದಿದ್ದುದು ಒಂಬತ್ತನ್ನು ಬೆರಸಿ ಸವರ್‌ಬೆರಿ ಹೆಂಡತಿ, ಛಾರ್ಲೆಟ್, ನೋಹ ಎಲ್ಲರೂ ಆಲಿವರನ ಮೇಲೆ ದೂರು ಹೇಳಿದರು. ಬಂಬಲ್ ಉರಿಯುವ ಬೆಂಕಿಗೆ ತುಪ್ಪ ಹುಯ್ಯುವ ಹಾಗೆ ತಾನೂ ತನಗಾದ ಭಂಗವನ್ನು ಉಪ್ಪು ಕಾರ ಹಚ್ಚಿ ಹೇಳಿ ಕೊಂಡ.

ಅವರು ಒಬ್ಬೊಬ್ಬರ ಮಾತನ್ನೂ ಕೇಳುತ್ತಿದ್ದ ಹಾಗೆಲ್ಲಾ ಸವರ್ ಬೆರಿಯ ಕೋಪ ಕೆರಳಿ ಕೆರಳಿ, ಉರಿದು ಉರಿದು, ಭುಗಿಭುಗಿಸುತ್ತಿತ್ತು. ಆ ಕೋಪದ ಆವೇಶದಲ್ಲಿ ಧಡಾರನೆ ಬಾಗಿಲು ತೆಗೆದು ಆಲಿವರನನ್ನು ನೆಲಮಾಳಿಗೆಯ ಕೋಣೆಯಿಂದ ಹೊರಗೆ ಎಳೆದುಕೊಂಡು ಬಂದ.

ಆಲಿವರನ ಮುಖಕ್ಕೆಲ್ಲಾ ಧೂಳು ಮಸಿ ಅಂಟಿಕೊಂಡಿತ್ತು. ಛಾರ್ಲೆಟ್, ನೋಹ ಮತ್ತು ಮನೆಯಾಕೆ ಮೂವರೂ ಸೇರಿ ಕಿತ್ತು, ಒದ್ದು, ಅವನ ಬಟ್ಟೆಬರೆ ಎಲ್ಲಾ ಹರಿದುಹೋಗಿತ್ತು. ಮೈ ಮುಖಗಳ ಮೇಲೆಲ್ಲಾ ಪರಚಿದ ಗುರುತು ಇನ್ನೂ ಹಸಿಹಸಿಯಾಗಿ ಕಾಣುತ್ತಿತ್ತು. ನೋಹ ತನ್ನ ತಾಯಿಯನ್ನು ಅಂದು ಆಡಿದಾಗ ಮುಖದ ಮೇಲೆ ಬಂದ ಕೋಪದ ಛಾಯೆ ಇನ್ನೂ ಆರಿರಲಿಲ್ಲ. ಆಗ ಮುಖ ಹಾಕಿಕೊಂಡಿದ್ದ ಗಂಟು ಇನ್ನೂ ಸಡಿಲವಾಗಿರಲಿಲ್ಲ. ಹಾಗಾಗಿ ಸವರ್‌ಬೆರಿ ಅವನನ್ನು ಹೊರಗೆಳೆದಾಗ ಅವನು ಇದ್ದ ಅವಸ್ಥೆಯನ್ನೂ ಅವನ ಸ್ವರೂಪವನ್ನೂ ಕಂಡು ತನ್ನ ಹೆಂಡತಿಯ ಮಾತನ್ನು ನಂಬಿದನು.

ಆಲಿವರನನ್ನು ಜಗ್ಗಿಸಿ ಒದರುತ್ತ, "ಏನೋ, ಇದೇ ನೀನು ಮಾಡುವ ಕೆಲಸ? ಮುಟ್ಠಾಳ!" ಎಂದು ಫಟೀರನೆ ಕೆನ್ನೆಗೆ ಒಂದು ಬಿಗಿದ.

ಆಲಿವರ್ "ಅವನು ಮೊದಲು ನನ್ನ ತಾಯಿಯನ್ನು ಬೈದ!" ಎಂದ.

"ಓಹೋಹೊ! ಬೈದರೇನೋ ಮಹಾ! ಅವಳು ಇದ್ದದ್ದೂ ಹಾಗೆಯೇ. ಅವಳೂ ನಿನ್ನ ಹಾಗೇ ಒಬ್ಬ ತಬ್ಬಲಿ!" ಎಂದು ಸವರ್‌ಬೆರಿ ಹೆಂಡತಿ ಎಂದಳು.

"ಅವಳೇನೂ ತಬ್ಬಲಿ ಅಲ್ಲ!" ಎಂದ ಆಲಿವರ್.

"ಅವಳೂ ತಬ್ಬಲಿ! ನೂರು ಸಾರಿ ತಬ್ಬಲಿ!" ಎಂದು ಅವಳು ಕಿರಿಚಿಕೊಂಡಳು.

ಆಲಿವರ್ ತಾನೂ ಕೋಪದಿಂದ "ಸುಳ್ಳು! ಅದು ನೂರು ಸಾರಿ ಸುಳ್ಳು!" ಎಂದ ಕಿರಿಚಿದ.

ಸವರ್‌ಬೆರಿ ಹೆಂಡತಿ ಗಂಡನ ಮುಖವನ್ನು ನೋಡುತ್ತ "ನೋಡಿದಿರಾ? ನೋಡಿದಿರಾ? ನಿಮ್ಮ ಎದುರಿಗೇ ಹೀಗಾಡುತ್ತಾನೆ!" ಎಂದು ತನ್ನ ಕಣ್ಣೀರಿನ ಕಟ್ಟೆಯನ್ನು ಕಿತ್ತಳು.

ಹೆಂಡತಿ ಹೀಗೆ ಅಳತೊಡಗಿದ ಮೇಲೆ, ಪಾಪ, ಸವರ್‌ಬೆರಿ ಏನು ಮಾಡಿಯಾನು? ಹೆಂಡತಿಯನ್ನು ಸಮಾಧಾನ ಪಡಿಸುವುದಕ್ಕೋಸ್ಕರ ಆಲಿವರನನ್ನು ಹಿಡಿದು ಹಣ್ಣುಗಾಯಿ ನೀರುಗಾಯಿಯಾಗುವ ತನಕ ಬಡಿದ. ತನ್ನ ಹೆಂಡತಿಗೂ "ಅಯ್ಯೋ ಪಾಪ, ಸಾಕು" ಎನ್ನಿಸುವ ವರೆಗೂ ಚಚ್ಚಿದ. ಬಂಬಲ್ "ಥೆ! ನಾನು ಕಂಕುಳಲ್ಲಿ ಈ ಕೋಲು ಸಿಕ್ಕಿಸಿಕೊಂಡು ಬಂದದ್ದು ವ್ಯರ್ಥ!" ಎನ್ನಿಸುವ ಮಟ್ಟಿಗೂ ಹೊಡೆದ. ಹೊಡೆದು ಹೊಡೆದು ಅವನಿಗೇ ಕೈ ಸೋತುಹೋಯಿತು.

ಇಷ್ಟಾದರೂ ಆಲಿವರ್ ತುಟಿ ಪಿಟಕ್ ಎನ್ನಲಿಲ್ಲ. ಅಷ್ಟು ಬಡಿಯುತ್ತಿದ್ದರೂ ಒಂದು ಕೂಗಾಗಲಿ ಒಂದು ನರಳಿದ ಶಬ್ದವಾಗಲಿ ಅವನ ಬಾಯಿಂದ ಬರಲಿಲ್ಲ. ಹಲ್ಲು ಕಚ್ಚಿಕೊಂಡು, ಅವುಡು ಕಚ್ಚಿಕೊಂಡು, ಬಂದದ್ದೆಲ್ಲಾ ಬರಲಿ ಎಂದು ಮೌನವಾಗಿ ಅನುಭವಿಸಿದ. ತಾನು ಈ ಅನ್ಯಾಯವನ್ನೆಲ್ಲಾ ಗಂಭೀರವಾಗಿ ಸಹಿಸಿದೆನೆಂದು ಅವನಿಗೆ ಏನೋ ಒಂದು ರೀತಿಯ ಅಭಿಮಾನ.

ಹೀಗೆ ಎಲ್ಲರಿಗೂ ಮನಸ್ಸಿಗೆ ಸಮಾಧಾನವಾಗುವಂತೆ ಆಲಿವರನಿಗೆ ಶಿಕ್ಷೆ ಮಾಡಿದ ಮೇಲೆ ಅಲ್ಲೇ ಅಡುಗೆಯ ಮನೆಯ ಹಿಂದಿನ ಕೋಣೆಯಲ್ಲಿ ಅವನನ್ನು ಪುನಃ ಕೂಡಿಹಾಕಿದರು. ಅವನ ಮುಂದೆ ಒಂದು ಚೂರು ರೊಟ್ಟಿಯನ್ನೂ ಒಂದು ಬಟ್ಟಲು ನೀರನ್ನೂ ಕುಕ್ಕಿದರು. ರಾತ್ರಿಯ ವರೆಗೂ ಹಾಗೆಯೇ ಕೂಡಿಹಾಕಿದ್ದರು. ರಾತ್ರಿ, ಸವರ್‌ಬೆರಿಯ ಹೆಂಡತಿ ಕೋಣೆಯ ಬಾಗಿಲಿನ ಹೊರಗೇ ನಿಂತು, ಆಲಿವರನ ಕಿವಿಗೆ ಬೀಳುವ ಹಾಗೆ ಅವನ ತಾಯಿಯನ್ನು ಯಥೇಚ್ಛವಾಗಿ ಬೈದಳು. ಆಲಿವರ್ ಏನೂ ಉಸಿರೆತ್ತದೆ ಇದ್ದುದನ್ನು ನೋಡಿ, ಧೈರ್ಯ ತಂದುಕೊಂಡು, ಬಾಗಿಲು ತೆಗೆದು, "ಹೋಗು, ಮೇಲೆ ಹೋಗಿ ಬಿದ್ದುಕೊ" ಎಂದಳು.

ಆಲಿವರ್ ಹೊರಗೆ ಬಂದ. ಅಲ್ಲಿಯೇ ಗೋಡೆಯ ಹತ್ತಿರ ನಿಂತಿದ್ದ ನೋಹ ಮತ್ತು ಛಾರ್ಲೆಟ್ ಅವನನ್ನು ಅಣಕಿಸಿದರು, ಹೀಯಾಳಿಸಿದರು. ಆದರೆ ಆಲಿವರನ ಮುಖದಲ್ಲಿ ಮೊದಲಿನ ರೋಷವಿರಲಿಲ್ಲ. ಅವನ ಹೃದಯ ದುಃಖದಿಂದ ಭಾರವಾಗಿತ್ತು. ಗಂಟಲಲ್ಲಿ ಏನೋ ಸಿಕ್ಕಿಕೊಂಡಂತೆ ಸಂಕಟವಾಗುತ್ತಿತ್ತು. ಆಗ ಅವನನ್ನು ಹಿಡಿದು, ಕಾದ ಬಾಣಲಿಯಲ್ಲಿ ಕೆಡವಿ ಹುರಿದಿದ್ದರೂ ಕೂಡ, ಅವನು ಕಂ ಕಿಂ ಎನ್ನುತ್ತಿರಲಿಲ್ಲ.

ಮಹಡಿಯ ಮೇಲೆ ಹತ್ತಿ ಹೋಗಿ, ತಾನು ನಿತ್ಯವೂ ಮಲಗುವ ಕಡೆಗೆ ಬರುವವರೆಗೂ ತನ್ನ ಗಾಢವಾದ ದುಃಖವನ್ನು ಅದು ಹೇಗೆ

ಅದುಮಿ ಹಿಡಿದಿದ್ದನೋ, ತಾನು ಒಂಟಿಯಾದೊಡನೆ ನೆಲದ ಮೇಲೆ ಕುಸಿದುಬಿದ್ದು, ಕೈಗಳಿಂದ ಮುಖ ಮುಚ್ಚಿಕೊಂಡು, ಹೃದಯವೇ ಕರಗಿ ಹರಿದುಹೋಗುತ್ತಿದೆಯೋ ಎಂಬಂತೆ ಅಳತೊಡಗಿದನು.

## ಆಲಿವರನ ಪಲಾಯನ

ಅತ್ತು ಅತ್ತು ತಾನೇ ಸ್ವಲ್ಪ ಶಾಂತಿ ಬಂದಿತು. ಸುತ್ತ ಏನೂ ಶಬ್ದವಿರಲಿಲ್ಲ. ಪಕ್ಕದಲ್ಲಿದ್ದ ಮಸಿ ಹಿಡಿದ ಮಂಕು ದೀಪ ಇನ್ನೇನು ಈಗಲೋ ಆಗಲೋ ನಂದಿಹೋಗುವ ಹಾಗಿತ್ತು.

ಆಲಿವರ್ ಮೆಲ್ಲನೆ ಸದ್ದುಮಾಡದೆ ಮೇಲೆದ್ದ. ಹಾಗೇ ಕಿವಿಗೊಟ್ಟು ಕೇಳಿದ. ಎಲ್ಲಿಯೂ ಯಾರದೂ ಏನೂ ಶಬ್ದವಿರಲಿಲ್ಲ. ಹಾಗೇ ಮೆಲ್ಲಗೆ ಕಿಟಕಿ ತೆಗೆದು ಹೊರಗೆ ನೋಡಿದ.

ರಾತ್ರೆ ಕತ್ತಲೆ. ಚಳಿ. ಆಕಾಶದಲ್ಲಿದ್ದ ನಕ್ಷತ್ರಗಳನ್ನು ನೋಡಿದರೆ ಎಂದಿಗಿಂತ ದೂರ ಹೋಗಿವೆಯೋ ಎಂಬ ಹಾಗಿತ್ತು. ಗಾಳಿ ಸ್ತಬ್ಧವಾಗಿತ್ತು. ನೆಲದ ಮೇಲೆ ಅಲ್ಲಲ್ಲೆ ನೆರಳು ಬಿದ್ದಿತ್ತು. ಗಾಳಿಯಿಲ್ಲದ್ದರಿಂದ ಅವು ಅಲುಗಾಡದೆ ಸತ್ತ ಶವಗಳಂತಿದ್ದುವು.

ಆಲಿವರ್ ಅದೇನು ಯೋಜನೆ ಮಾಡಿಕೊಂಡನೋ! "ಕತ್ತಲು ಕಳೆಯಲಿ. ಬೆಳಗಿನ ಜಾವವಾಗಲಿ" ಎಂದು ಕಾಯುತ್ತ ಕುಳಿತುಕೊಂಡ.

ಕತ್ತಲು ಕಳೆಯಿತು. ಬೆಳಗಿನ ಜಾವದ ಅರುಣ ಕಿರಣಗಳು ಕಿಟಕಿಯ ಸಂದುಗಳಿಂದ ಒಳಕ್ಕೆ ನುಸುಳಿಬಂದುದನ್ನು ಆಲಿವರ್ ಕಂಡು, ಮೆಲ್ಲನೆ ಎದ್ದು, ಹೆಜ್ಜೆಯ ಸಪ್ಪಳವಾಗದಂತೆ ಮೆಟ್ಟಲಿಳಿದು ಬಂದ. ಮನೆಯವರು ಯಾರೂ ಇನ್ನೂ ಎದ್ದಿಲ್ಲವೆಂಬುದನ್ನು ಕಿವಿಗೊಟ್ಟು ಕೇಳಿ ಧೈರ್ಯ ಮಾಡಿಕೊಂಡು, ಎಂಬ ಎಚ್ಚರಿಕೆಯಿಂದ ಬೀದಿಯ ಬಾಗಿಲಿನ ಅಗುಳಿಯನ್ನು [illegible] ಬಾಗಿಲು ತೆರೆದನು. ಒಂದು ಕ್ಷಣ ಹೊಸಲಿನ ಮೇಲೆ [illegible]ಯಿಟ್ಟು, [illegible], ಬೆದರುಗಣ್ಣು ಬಿಟ್ಟು ಸುತ್ತಲೂ ನೋಡಿದ.

ಆದರೆ ಹಾಗೆ ತಡೆದದ್ದು ಒಂದೇ ಕ್ಷಣ. ಮರುಕ್ಷಣ ಆಲಿವರ್ ಆ ಮನೆಯನ್ನು ಬಿಟ್ಟು ಬೀದಿಗೆ ಬಂದಿದ್ದ.

ಬೀದಿಗೇನೋ ಬಂದಾಯಿತು. ಆದರೆ ಯಾವ ಕಡೆ ತಿರುಗಿ ಹೋಗಬೇಕೋ ಆಲಿವರನಿಗೆ ತಿಳಿಯದು. ಎಡಕ್ಕೂ ಬಲಕ್ಕೂ ನೋಡಿದ. ಪಕ್ಕದಲ್ಲಿ ಒಂದು ಗುಡ್ಡ. ಆ ಗುಡ್ಡದ ಕಡೆಗೆ ಗಾಡಿಗಳ ಸಾಲು ಹೋಗುತ್ತಿದ್ದುದನ್ನು ಅವನು ಅನೇಕ ಸಲ ಕಂಡಿದ್ದ. ಅದೇ ದಾರಿಯನ್ನು ತಾನೂ ಹಿಡಿದು ಗುಡ್ಡದಾಚೆ ಹೋಗಬೇಕೆಂದು ಅವನಿಗೆನ್ನಿಸಿತು. ಅದರಂತೆ ಹಾಗೇ ಆ ಮಾರ್ಗವನ್ನೇ ಹಿಡಿದು ಹೊರಟ.

ಹಾಗೇ ಹೋಗುತ್ತ ಆಲಿವರನಿಗೆ ಜ್ಞಾಪಕ ಬಂತು. ತಾನು ಇದೇ ದಾರಿಯಲ್ಲಿ ಬಂಬಲನ ಜೊತೆಯಲ್ಲಿ ನಡೆದುಹೋದದ್ದು ನೆನಪಾಯಿತು. ಯಾವಾಗ ಎಂದೂ ನೆನಪಾಯಿತು. ಬಂಬಲ್ ತನ್ನನ್ನು ಮೊದಲು ಸಲ ಅನಾಥಾಲಯಕ್ಕೆ ಕರೆದುಕೊಂಡು ಹೋಗುವುದಕ್ಕೆ ಮುಂಚೆ ತಾನು ವಾಸವಾಗಿದ್ದ ಮನೆ ಅದೇ ದಾರಿಯಲ್ಲಿದೆ ಎಂದು ಅವನಿಗೆ ಏನೋ ಸಂತೋಷವಾಯಿತು. ಹೌದು, ಆ ಮನೆಯಲ್ಲಿ ತನ್ನ ಹಳೆಯ ಸ್ನೇಹಿತರಾದ ಕೆಲವರು ಹುಡುಗರು ಇದ್ದರು.

ಆದರೆ ಆ ಮನೆಯ ಹತ್ತಿರ ಬಂದಾಗ ಸ್ವಲ್ಪ ಹೆದರಿಕೆಯೂ ಆಯಿತು. ಹಿಂದಿರುಗಿ ಓಡಿಹೋಗಲೇ ಎನ್ನಿಸಿತು. ಯಾರಾದರೂ ನೋಡಿ, ಪುನಃ ಸವರ್‌ಬೆರಿಗೆ ಹಿಡಿದುಕೊಟ್ಟರೆ ಏನು ಗತಿ ಎಂದು ದಿಗಿಲಾಯಿತು. ಆದರೂ ತಾನು ಬಹಳ ದೂರ ಬಂದಿರುವುದರಿಂದ ಯಾರೂ ತನ್ನ ಬೆನ್ನಟ್ಟಿ ಬರಲಾರರೆಂಬ ಧೈರ್ಯದಿಂದ ಮುಂದೆ ಆ ಮನೆಯ ಹತ್ತಿರ ಹೋದ.

ಮನೆಯವರು ಯಾರೂ ಇನ್ನೂ ಎದ್ದಿರಲಿಲ್ಲ. ಆಲಿವರ್ ಹಾಗೇ ಆ ಮನೆಯ ತೋಟದೊಳಗೆ ಇಣಿಕಿ ನೋಡಿದ. ಅಲ್ಲಿ ಒಬ್ಬ ತೀರ ಸಣ್ಣ ಹುಡುಗ ಯಾವುದೋ ಒಂದು ಮಣ್ಣಿನ ಪಾತಿಯ ಹತ್ತಿರ ಕುಳಿತು ಏನೋ

ಕೆದಕುತ್ತಿದ್ದ. ಸ್ವಲ್ಪ ಹೊತ್ತಿನಲ್ಲಿಯೇ ಅವನು ತಲೆಯೆತ್ತಿ ಈ ಕಡೆ ತಿರುಗಿದಾಗ, ಅವನು ತನ್ನ ಚಿಕ್ಕಂದಿನ ಒಡನಾಡಿಯಾದ ಡಿಕ್ ಎಂದು ಆಲಿವರನಿಗೆ ಗೊತ್ತಾಯಿತು. ಅವರಿಬ್ಬರೂ ಎಷ್ಟೋ ಸಲ ಒಟ್ಟಿಗೆ ಏಟು ತಿಂದು, ಒಟ್ಟಿಗೆ ಒಂದೇ ನೆಲಮಾಳಿಗೆಯಲ್ಲಿ ಶಿಕ್ಷೆ ಅನುಭವಿಸಿದ್ದರು.

"ಓ, ಡಿಕ್!" ಎಂದು ಆಲಿವರ್ ಮೆಲ್ಲಗೆ ಕರೆದ.

ಹುಡುಗ ಅವನ ದನಿಯನ್ನು ಗುರುತಿಸಿ, ಓಡಿಬಂದು ಬೇಲಿಯ ಕಟಕಟೆಯ ಮೂಲಕ ಕೈ ಚಾಚಿ ಆಲಿವರನ ಕೈ ಹಿಡಿದುಕೊಂಡನು.

"ಯಾರಾದರೂ ಎದ್ದಿದ್ದಾರೆಯೆ? ಡಿಕ್!"

"ಇನ್ನೂ ಯಾರೂ ಎದ್ದಿಲ್ಲ. ನಾನೊಬ್ಬನೆ."

"ಡಿಕ್! ನನ್ನನ್ನು ನೋಡಿದೆಯೆಂದು ನೀನು ದಯಮಾಡಿ ಯಾರಿಗೂ ತಿಳಿಸಬೇಡ. ನಾನು ಮನೆ ಬಿಟ್ಟು ಓಡಿಹೋಗುತ್ತಿದ್ದೇನೆ, ಡಿಕ್. ನನ್ನನ್ನು ತುಂಬ ಬೈದು, ಹೊಡೆದು, ಬಡಿದು, ಗೋಳಾಡಿಸಿದರು. ಆದ್ದರಿಂದ ಎಲ್ಲಿಯಾದರೂ ದೇಶಾಂತರ ಹೋಗಿಬಿಡಬೇಕೆಂದು ಈಗ ಹೊರಟಿದ್ದೇನೆ."

"ಎಲ್ಲಿಗೆ ಹೋಗುತ್ತೀಯೆ, ಆಲಿವರ್?"

"ಎಲ್ಲಿಗೆ ಎಂದು ತಿಳಿಯದು. ಎಲ್ಲಿಗಾದರೂ ಸರಿ. ಇಲ್ಲಿ ಮಾತ್ರ ಬೇಡ. ಇಲ್ಲಿ ನೀನು ಹೇಗಿದ್ದೀಯೆ, ಡಿಕ್?"

"ನನಗೇನು ಆಲಿವರ್! ಇಂದೋ ನಾಳೆಯೋ ನನ್ನ ಕತೆ ಬೇಗನೆ ಮುಗಿದುಹೋಗುತ್ತದೆ. ನಾನು ಬಹಳ ದಿವಸ ಬದುಕುವುದಿಲ್ಲವೆಂದು ನೆನ್ನೆ ಡಾಕ್ಟರು ಹೇಳುತ್ತಿದ್ದರು." ಎಂದು ಆ ಮಗು ಕಷ್ಟದಿಂದ ಪಾರಾಗುವೆನೆಂಬ ಸಂತೋಷದಿಂದ ಮೆಲುನಗು ನಗುತ್ತ "ಒಳ್ಳೆಯದು, ಆಲಿವರ್, ನೀನು ಹೊರಡು. ಎಲ್ಲರೂ ಎದ್ದೇಳುವ ಹೊತ್ತಾಯಿತು. ನೀನು ಹೊರಡು" ಎಂದಿತು.

"ಒಳ್ಳೆಯದು. ಹೋಗಿ ಬರುತ್ತೇನೆ, ಡಿಕ್. ನಾನು ಹಿಂದಿರುಗಿ ಬಂದಾಗ ಖಂಡಿತ ನಿನ್ನನ್ನು ಬಂದು ಕಾಣುತ್ತೇನೆ" ಎಂದ ಆಲಿವರ್.

ಡಿಕ್ ಪುನಃ ಮೆಲುನಗು ನಕ್ಕು, "ನೀನು ಪುನಃ ಬರುವ ವೇಳೆಗೆ ನಾನು ಇಲ್ಲಿ ಇರುವುದಿಲ್ಲ, ಆಲಿವರ್. ಆ ವೇಳೆಗೆ ನಾನು ಸತ್ತು ಸ್ವರ್ಗ ದಲ್ಲಿರುತ್ತೇನೆ" ಎಂದು ಹೇಳಿ, "ಓ, ಆಲಿವರ್" ಎನ್ನುತ್ತ ಆ ಮಗು ಕಟಕಟೆಯನ್ನು ಹತ್ತಿ ಆಲಿವರನನ್ನು ತಬ್ಬಿಕೊಂಡು, "ನಿನಗೆ ಸುಖ ವಾಗಲಿ ಆಲಿವರ್. ನಿನಗೆ ದೇವರು ಒಳ್ಳೆಯದು ಮಾಡಲಿ, ಆಲಿವರ್!" ಎಂದು ಹರಸಿದನು.

ಆಲಿವರನಿಗೆ ಅದುವರೆಗೆ ಯಾರೂ ಒಳ್ಳೆಯ ಮಾತನಾಡಿದವ ರಿರಲಿಲ್ಲ, ಆಶೀರ್ವಾದ ಮಾಡಿದವರಿರಲಿಲ್ಲ. ಈಗ ಆಶೀರ್ವಾದ ಮಾಡಿದ ಮಗು ಆಲಿವರನಿಗಿಂತ ವಯಸ್ಸಿನಲ್ಲಿ ಚಿಕ್ಕವನು. ಆದರೂ ಆಲಿವರನಿಗೆ ಅದೊಂದು ಮಹಾ ರಕ್ಷೆಯಿದ್ದಂತೆ ಆಯಿತು. ಅವನು ಅದನ್ನು ಮುಂದೆ ಬಹಳ ಕಾಲ ಮರೆಯದ ಹಾಗೆ ಜ್ಞಾಪಕದಲ್ಲಿಟ್ಟುಕೊಂಡಿದ್ದ.

ಆಲಿವರ್ ಹೀಗೇ ಮುಂದೆ ಹೋದ. ಎಂಟು ಗಂಟೆಯ ವೇಳೆಗೆ ಅವನು ಸುಮಾರು ಐದು ಮೈಲಿ ದೂರ ಬಂದಿದ್ದ. ಆದರೂ ಎಲ್ಲಿ ಯಾರು ಕಂಡು ಹಿಡಿದುಕೊಂಡು ಹೋಗುವರೋ ಎಂಬ ಸಂತತವಾದ ಹೆದರಿಕೆ ಯಿಂದ ಆಗಾಗ್ಗೆ ಅಲ್ಲಲ್ಲೆ ಮರಗಳ ಹಿಂದೆ, ಪೊದೆಗಳ ಹಿಂದೆ, ಬೇಲಿಗಳ ಹಿಂದೆ, ಹಳ್ಳಗಳ ಒಳಗೆ ಅವಿತುಕೊಳ್ಳುತ್ತ ಅವಿತುಕೊಳ್ಳುತ್ತ ಮುಂದೆ ಹೋಗುತ್ತಿದ್ದ.

ಹೀಗೇ ಹೋಗುತ್ತಾ ಹನ್ನೆರಡು ಗಂಟೆಯಾಯಿತು. ಬಿಸಿಲು ನೆತ್ತಿಗೆ ಬಂತು. ಆಲಿವರ್ ಆಯಾಸದಿಂದ ನಡೆಯಲಾರದೆ ರಸ್ತೆಯ ಪಕ್ಕದಲ್ಲಿದ್ದ ಒಂದು ಮೈಲಿಕಲ್ಲಿನ ಹತ್ತಿರ ಕುಳಿತುಕೊಂಡು, "ಎಲ್ಲಿಗೆ ಹೋದರೆ ಬದುಕಬಹುದು? ಎಲ್ಲಿಗೆ ಹೋದರೆ ಅನ್ನ ತಿನ್ನಬಹುದು?" ಎಂದು ಯೋಚಿಸತೊಡಗಿದ.

ಹಾಗೇ ಯೋಚಿಸುತ್ತ ಸುತ್ತಲೂ ನೋಡಿದಾಗ ಪಕ್ಕದಲ್ಲಿದ್ದ ಮೈಲಿ ಕಲ್ಲಿನ ಮೇಲೆ “70 ಮೈಲಿ – ಲಂಡನ್ ನಗರಕ್ಕೆ” ಎಂದು ಬರೆದಿತ್ತು. ಲಂಡನ್ನಿನ ಹೆಸರನ್ನು ಆಲಿವರ್ ಕೇಳಿದ್ದ. ಲಂಡನ್ನಿನಂಥ ಮಹಾ ಪಟ್ಟಣಕ್ಕೆ ತಾನು ಹೋಗಿ ಸೇರಿಕೊಂಡರೆ ಬಂಬಲನು ಕೂಡ ಅಲ್ಲಿ ತನ್ನನ್ನು ಕಂಡುಹಿಡಿಯಲಾರನು ಎಂದು ಅವನಿಗೆ ಎನ್ನಿಸಿತು. ಲಂಡನ್ನಿನಂಥ ದೊಡ್ಡ ಪಟ್ಟಣದಲ್ಲಿ ಬೇಕಾದಷ್ಟು ಕೆಲಸ ಸಿಕ್ಕುತ್ತದೆ, ಕೆಲಸ ಮಾಡಿದರೆ ಹೊಟ್ಟೆಯ ತುಂಬ ಅನ್ನ ಸಿಕ್ಕುತ್ತದೆ ಎಂದು ಅವನು ತಿಳಿದು ಕೊಂಡಿದ್ದ. ಅಪರಂತೆಯೇ ಲಂಡನ್ನಿನ ದಾರಿ ಇದೇ ಎಂದು ತಿಳಿದೊಡ ನೆಯೇ ದಿಗ್ಗನೆದ್ದು ಅದೇ ದಾರಿಯನ್ನು ಹಿಡಿದು ಹೊರಟ.

ಆಲಿವರ್ ದಾರಿಯಲ್ಲಿ ಅಲ್ಲಲ್ಲಿ ಸಿಕ್ಕಿದ ಗುಡಿಸಿಲುಗಳಲ್ಲಿ ತಿನ್ನಲು ಏನಾದರೂ ಬೇಡುವನು. ಸಿಕ್ಕಿದ ಚೂರು ರೊಟ್ಟಿಯನ್ನು ತಿಂದು, ಇಷ್ಟು ನೀರು ಕುಡಿದು ಮುಂದೆ ನಡೆಯುವನು. ಹೀಗೆ ನಡೆದು ಆ ದಿನ ರಾತ್ರಿ ಯಾಗುವುದರೊಳಗಾಗಿ ಇಪ್ಪತ್ತು ಮೈಲಿ ಮುಗಿಸಿದ.

ರಾತ್ರಿ, ಅಲ್ಲಿಯೇ ಪಕ್ಕದ ಹೊಲದಲ್ಲಿ ಕಂಡ ಹುಲ್ಲಿನ ಮೆದೆಯನ್ನು ಆಶ್ರಯಿಸಿ ಮಲಗಬೇಕೆಂದುಕೊಂಡ. ವಿಶಾಲವಾದ ಆ ಹೊಲದಲ್ಲಿ ತಾನೊಬ್ಬನೇ ಒಂಟಿಯಾಗಿರಲು ಅವನಿಗೆ ಮೊದಲು ಹೆದರಿಕೆಯಾಯಿತು. ಗಾಳಿ ಗೋಳೋ ಎಂದು ಅಳುವಂತೆ ಬೀಸುತ್ತಿತ್ತು. ಜೊತೆಗೆ ಚಳಿ, ಜೊತೆಗೆ ಹಸಿವು. ಅನಾಥನೆಂಬ ಶಬ್ದದ ಪೂರ್ಣ ಅರ್ಥ ಅಂದು ಆಲಿವರ ನಿಗೆ ಆಯಿತು. ಆದರೇನು? ಇಪ್ಪತ್ತು ಮೈಲಿ ಹಸಿದ ಹೊಟ್ಟೆಯಲ್ಲಿ ನಡೆದು ಬಂದ ಆಯಾಸ ಬೇಗ ನಿದ್ರೆಯನ್ನು ಕರೆದುಕೊಂಡು ಬಂದು ಅವನ ದುಃಖಗಳನ್ನೆಲ್ಲ ಬೆಳಗಿನವರೆಗು ಮರೆಯಿಸಿಬಿಟ್ಟಿತು.

ಬೆಳಗ್ಗೆ ಏಳುವ ವೇಳೆಗೆ ಆಲಿವರನ ಮೈಯೆಲ್ಲ ಸೆಟೆತುಕೊಂಡಿತ್ತು. ರಾತ್ರಿಯ ಚಳಿ ಗಾಳಿ ಏನು ಸಾಮಾನ್ಯವೆ? ಆದರೂ ಹೇಗೋ ಎದ್ದು, ಕೈ ಕಾಲುಗಳನ್ನು ಉಜ್ಜಿ ಚೇತರಿಸಿಕೊಂಡ. ಹಿಂದಿನ ದಿನದಂತೆಯೇ

ಹೊರಟ. ಆದರೆ ಆ ಎರಡನೆಯ ದಿನ ಮೊದಲನೆಯ ದಿನದಷ್ಟು ನಡೆಯ ಲಾಗಲಿಲ್ಲ. ಹನ್ನೆರಡು ಮೈಲು ಮುಗಿಸುವುದರೊಳಗಾಗಿ ರಾತ್ರಿಯಾಗಿ ಹೋಯಿತು. ಪಾದಗಳೆಲ್ಲ ಉರಿದುರಿದು ಸಿಡಿಯುತ್ತಿತ್ತು. ಕಾಲುಗಳಂತೂ ಗಡಗಡನೆ ನಡುಗುತ್ತಿದ್ದುವು. ಆ ರಾತ್ರೆ ಪುನಃ ಇನ್ನೊಂದು ಹೊಲದ ನಡುವೆ ಮಲಗಿದ. ರಾತ್ರಿಯ ಆ ಚಳಿಗಾಳಿಯಿಂದ ಮೊದಲೇ ತುಂಬ ಲಕ್ಷಣವಾಗಿದ್ದ ಅವನ ಆರೋಗ್ಯ ಇನ್ನಷ್ಟು ಲಕ್ಷಣವಾಯಿತು. ಬೆಳಗ್ಗೆ ಎದ್ದರೆ, ತೆವಳುವುದಕ್ಕೆ ಕೂಡ ಅವನಿಗೆ ತ್ರಾಣವಿರಲಿಲ್ಲ.

ಹಿಂದಿನ ದಿನಗಳು ಎಷ್ಟೋ ಮೇಲಾಗಿತ್ತು. ದಾರಿಯಲ್ಲಿ ಎಲ್ಲಿ ಯಾದರೂ ಬೇಡಿದರೆ, ಯಾರಾದರೂ ಪುಣ್ಯಾತ್ಮರು ಏನಾದರೂ ಚೂರು ಪಾರು ಕೊಡುತ್ತಿದ್ದರು. ಅದನ್ನು ತಿಂದು ಆಲಿವರ್ ಹೇಗೋ ಜೀವ ಧಾರಣೆ ಮಾಡಿಕೊಳ್ಳುತ್ತಿದ್ದ. ಆದರೆ ಈ ಮೂರನೆಯ ದಿನ ದಾರಿಯ ಕೆಲವು ಗ್ರಾಮಗಳಲ್ಲಿ ಭಿಕ್ಷೆ ಬೇಡುವುದನ್ನು ನಿಷೇಧಿಸಿದ್ದರು. ಯಾರಾ ದರೂ ಭಿಕ್ಷೆ ಬೇಡಿದರೆ ಅವರನ್ನು ಸೆರೆಮನೆಯಲ್ಲಿ ಕೂಡಿಬಿಡುವುದಾಗಿ ಹೆದರಿಸಿದ್ದರು. ಅಂಜಿದವರ ಮೇಲೆ ಕಪ್ಪೆ ಹಾಕಿದ ಹಾಗಾಗಿ, ಆಲಿವರ್ ಎಲ್ಲಿಯೂ ಒಂದು ತುತ್ತು ಬೇಡಲು ಅಂಜಿ, ಮುಂದೆ ಹೋದ.

ಆದರೆ, ಯಾರು ಕೈಬಿಟ್ಟರೂ ಕಷ್ಟಕಾಲದಲ್ಲಿ ದೇವರು ಕೈಬಿಡು ವುದಿಲ್ಲ. ಸಂಕಟ ಬಂದ ಸಮಯದಲ್ಲಿ ಯಾರನ್ನಾದರೂ ಒದಗಿಸುತ್ತಾನೆ. ಆಲಿವರನಿಗೂ ಹಾಗೆಯೇ ಸಹಾಯ ಒದಗಿಬಂತು. ದಾರಿಯಲ್ಲಿನ ಒಂದು ಗ್ರಾಮದ ಸುಂಕದಕಟ್ಟೆಯ ಹತ್ತಿರ ಆ ಸುಂಕದವನ ಹೆಂಡತಿ ಆಲಿವರನ ನಿಶ್ಶಕ್ತಿಯನ್ನು ಕಂಡು ಕನಿಕರಿಸಿ, ಅವನನ್ನು ತನ್ನ ಮನೆಯ ನೆರಳಿಗೆ ಕರೆದಳು. ಅವನು ಬಂದು ಸ್ವಲ್ಪ ವಿಶ್ರಮಿಸಿಕೊಂಡ ಮೇಲೆ, ಅವನಿಗೆ ಇಷ್ಟು ರೊಟ್ಟಿ ಹಾಲುಗಳನ್ನು ಆ ಮುದುಕಿ ಕೊಟ್ಟಳು. ಆಕೆಯ ಮೊಮ್ಮಗ ಒಬ್ಬ, ಎಷ್ಟೋ ಹಿಂದೆ ಸಮುದ್ರಯಾನ ಮಾಡಲು ಹೋದ ವನು, ಹಡಗು ಒಡೆದು ಎಲ್ಲಿಯೋ ಪರದೇಶಿಯಾಗಿ ಅಲೆಯುತ್ತಿದ್ದುದು

ಅವಳಿಗೆ ಜ್ಞಾಪಕ ಬಂತು. ಮನೆ ಬಿಟ್ಟು ಹೋಗುವಾಗ ಈ ಆಲಿವರ ನಷ್ಟೇ ಚಿಕ್ಕವನಾಗಿದ್ದ ತನ್ನ ಮೊಮ್ಮಗನನ್ನು ಜ್ಞಾಪಿಸಿಕೊಂಡು ಆ ಮುದುಕಿ ಆಲಿವರನನ್ನು ಆದರಿಸಿದಳು. ನಯವಾಗಿ, ಮೃದುವಾಗಿ "ಅಪ್ಪ, ಅಣ್ಣ" ಎಂದು ಅವನನ್ನು ದಯೆಯಿಂದ ನುಡಿಸಿದಳು.

ಆಲಿವರನಿಗೆ ಹೋದ ಜೀವ ಬಂದ ಹಾಗಾಯಿತು. ಹಿಂದೆ ತಾನು ಅನುಭವಿಸಿದ ಕಷ್ಟಗಳೆಲ್ಲ ಮರೆತುಹೋಯಿತು. ಅಷ್ಟೇಕೆ, ಆಲಿವರನಿಗೆ ಹೊಸ ಜೀವ ಬಂದ ಹಾಗಾಯಿತು.

ಸುಂಕದವನ ಹೆಂಡತಿ ಆಲಿವರನನ್ನು ಇನ್ನೂ ಎರಡು ಮೂರು ದಿನ ಅಲ್ಲೇ ನಿಲ್ಲಿಸಿಕೊಂಡು ಮನೆಯ ಮಗುವಿಗಿಂತ ಅಧಿಕವಾಗಿ ಆರೈಕೆ ಮಾಡಿದಳು. ಏಳನೆಯ ದಿವಸ ಬೆಳಗ್ಗೆ ಆಲಿವರನು ತಾನು ಹೊರಟೇ ತೀರಬೇಕೆಂದು ಹಠ ಹಿಡಿಯಲು, ಅವನನ್ನು ಮುದ್ದಿಸಿ ಬೀಳ್ಕೊಟ್ಟಳು.

ಆ ದಿನವೆಲ್ಲಾ ಪುನಃ ನಡೆದ. ಸಂಜೆಯಾಗುವ ವೇಳೆಗೆ ಇನ್ನೊಂದು ಹಳ್ಳಿಗೆ ಬಂದ. ಅಲ್ಲಿ ಅವನನ್ನು ನೀನೇ ಎಂದು ವಿಚಾರಿಸುವವರು ಯಾರೂ ಇರಲಿಲ್ಲ. ಆಲಿವರ್ ದಿಕ್ಕಿಲ್ಲದೆ ಅನಾಥನಾಗಿ ಯಾರದೋ ಮನೆಯ ಬಾಗಿಲಿನ ಮೆಟ್ಟಲುಗಳ ಮೇಲೆ ಹಾಗೆಯೇ ಮುದುರಿಕೊಂಡು ಮಲಗಿದ. ಅವನ ಮೈ ಮುಖ ಎಲ್ಲ ದೂಳಿನಿಂದ ಮುಚ್ಚಿಹೋಗಿತ್ತು. ಕಾಲು ಒಡೆದು, ಬಿರುಕಿನಿಂದ ರಕ್ತ ಬಸಿಯುತ್ತಿತ್ತು.

ಹಾಗೇ ರಾತ್ರೆ ಕಳೆಯಿತು. ಬೆಳಗಾಯಿತು. ಸೂರ್ಯನು ತನ್ನ ತುಂಬುಪ್ರಕಾಶದಿಂದ ಉದಯಿಸಿದನು. ಊರೆಲ್ಲ ಎಚ್ಚರಗೊಂಡಿತು. ಬೀದಿಯಲ್ಲಿ ಜನ ಓಡಿಯಾಡತೊಡಗಿದರು. ಅವರಲ್ಲಿ ಒಬ್ಬಿಬ್ಬರು ಅಲ್ಲಿ ಮೆಟ್ಟಲ ಮೇಲೆ ಮುದುರಿಕೊಂಡು ಮಲಗಿದ್ದ ಆಲಿವರನ ಕಡೆ ನೋಡಿದರು. ಯಾರೂ ನಿಲ್ಲಲಿಲ್ಲ, ಹಾಗೆಹಾಗೇ ತಮ್ಮ ದಾರಿ ತಾವು ಹಿಡಿದು ಹೋದರು.

ಆಲಿವರನನ್ನು ಯಾರೂ ಮಾತನಾಡಿಸಲಿಲ್ಲ. ಆಲಿವರನಿಗೂ ಯಾರನ್ನೂ ಮಾತನಾಡಿಸುವ, ಯಾರನ್ನಾದರೂ ಭಿಕ್ಷೆ ಬೇಡುವ ಮನಸ್ಸು ಬರಲಿಲ್ಲ. ಸುಮ್ಮನೆ ಹಾಗೇ ಅಲ್ಲೇ ಮೆಟ್ಟಿಲ ಮೇಲೆ ಮುದುರಿಕೊಂಡು ಮಲಗಿದ್ದವನು ಎದ್ದು ಸುಮ್ಮನೆ ಕುಳಿತುಕೊಂಡ.

## "ಕಳ್ಳಕೊರಮ"

ಆಲಿವರ್ ಹೀಗೆ ಕುಳಿತಿರಲಾಗಿ ಒಬ್ಬ ಹುಡುಗ ಅವನ ಎದುರಿಗೆ ಹಾದುಹೋದ. ಆಲಿವರ್ ದಿಕ್ಕಿಲ್ಲದ ತಬ್ಬಲಿಯಂತೆ ಕುಳಿತಿದ್ದುದನ್ನು ಆ ಹುಡುಗ ನೋಡಿದ. ಸ್ವಲ್ಪ ದೂರ ಹೋಗಿ, ಹಿಂದಿರುಗಿ ಪುನಃ ಆಲಿವರನನ್ನು ಹಾದುಹೋದ. ಎರಡು ಸಲ ಹೀಗೆ ಹಾದುಹೋದರೂ ಆಲಿವರ್ ಮರದ ಗೊಂಬೆಯಂತೆ ಅಲ್ಲಾಡದೆ ಮೌನವಾಗಿದ್ದುದನ್ನು ನೋಡಿ, ಮೂರನೆಯ ಬಾರಿ ಅವನನ್ನು ದಾಟಿ ಹೋಗುವಾಗ ಅವನ ಸಮೀಪಕ್ಕೆ ಬಂದು ನಿಂತುಕೊಂಡ.

"ಏನೋ ಗುಬ್ಬಚ್ಚಿ? ಇದೇಕೆ ಹೀಗೆ ಚಳಿಯಲ್ಲಿ ನಡುಗುತ್ತಿದ್ದೀ?" ಎಂದ.

ಆಲಿವರ್ ತಲೆಯೆತ್ತಿ, ಮಾತನಾಡಿಸಿದ ಹುಡುಗನನ್ನು ನೋಡಿದ. ವಿಚಿತ್ರವಾಗಿದ್ದ, ಆ ಹುಡುಗ. ಮುಖ ಅಷ್ಟೇನೂ ಸುಟಿಯಾಗಿರಲಿಲ್ಲ. ಕೈ ಮೈ ಕೊಳೆ ಎಂದರೆ ಕೊಳೆ. ಅವನು ಹುಡುಗನ ಹಾಗೆ ಮೊದಲ ನೋಟಕ್ಕೆ ಕಂಡುಬಂದರೂ ಹಾಗೇ ಗಮನಿಸಿದರೆ ವಯಸ್ಸಾದವರ ಚೇಷ್ಟೆಗಳೇ ಅವನಲ್ಲಿ ಕಂಡುಬಂದವು. ಅವನ ವಯಸ್ಸಿಗೆ ಅವನು ಕುಳ್ಳ. ಕಾಲುಗಳೆರಡೂ ಡೊಂಕುಡೊಂಕಾಗಿ ಬಾಗಿದ್ದುವು. ಅವನು ಹಾಕಿಕೊಂಡಿದ್ದ ಅಂಗಿ ಹಿಮ್ಮಡಿಯವರೆಗೂ ಮುಟ್ಟುತ್ತಿತ್ತು. ತೋಳೂ ಹಾಗೆಯೇ ಉದ್ದವಾಗಿದ್ದುದರಿಂದ ಅದರ ತುದಿಗಳನ್ನು ಮಡಿಚಿ ಸುರುಳಿ ಸುತ್ತಿ

ಕೈಗಳನ್ನು ಈಚೆ ಇಳಿಬಿಟ್ಟಿದ್ದ. ಅಂಗಿಯನ್ನು ಮೇಲಕ್ಕೆತ್ತಿ, ಒಳಗಿದ್ದ ಷರಾಯಿಯ ಪಕ್ಕದ ಜೇಬಿನಲ್ಲಿ ಬಲಗೈಯನ್ನು ತುರುಕಿಕೊಂಡಿದ್ದ.

ಆಲಿವರ್ ಮಾತನಾಡದೆ ತನ್ನನ್ನು ಸುಮ್ಮನೆ ದುರುಗುಟ್ಟಿ ನೋಡು ವುದನ್ನು ಕಂಡು, ಅವನು "ಅದೇಕೆ ಹಾಗೆ ನೋಡುತ್ತೀ, ಗುಬ್ಬಚ್ಚಿ? ಇಲ್ಲೇಕೆ ಹೀಗೆ ಕುಳಿತಿದ್ದೀ, ಹೇಳು" ಎಂದ.

"ಹಸಿವು. ಆಯಾಸ." ಎಂದ ಆಲಿವರ್. ಅಷ್ಟು ಹೇಳುವ ಹೊತ್ತಿ ಗಾಗಲೇ ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. "ತುಂಬ ದೂರ ನಡೆದು ಬಂದಿದ್ದೇನೆ" ಎಂದ.

ಆ ಬಂದವನು, ಹುಡುಗನ ಹಾಗಿದ್ದ ಆ ದೊಡ್ಡವನು ಏನೂ ಮಾತ ನಾಡಲಿಲ್ಲ. ಆಲಿವರನನ್ನು ಕೈಹಿಡಿದು ಎಬ್ಬಿಸಿ, ಅವನನ್ನು ಕರೆದು ಕೊಂಡು ಪಕ್ಕದ ಒಂದು ಅಂಗಡಿಗೆ ಹೋದ. ಅಲ್ಲಿ ಒಂದಿಷ್ಟು ರೊಟ್ಟಿ ಕೊಂಡುಕೊಂಡು, ಪಕ್ಕದಲ್ಲಿಯೇ ಇದ್ದ ಒಂದು ಕಾಫಿಯಂಗಡಿಗೆ ಆಲಿವರ ನನ್ನು ಕರೆದುಕೊಂಡು ಹೋದ. ಅಲ್ಲಿ ಆಲಿವರನ ಮುಂದೆ ಆ ರೊಟ್ಟಿಯನ್ನು ಇಟ್ಟು, ಕಾಫಿಯನ್ನು ತರಿಸಿದ. ಆಲಿವರನಿಗೆ ತೃಪ್ತಿಯಾಗುವವರೆಗೂ ತಿನ್ನಿಸಿದ. ತಿನ್ನಿಸುತ್ತ ಹಾಗೆಯೇ ಎವೆಯಿಕ್ಕದೆ ಆಲಿವರನನ್ನೇ ಗಮನಿಸಿ ಅವನನ್ನೇ ಕಣ್ಣುಗಳಿಂದ ಅಳತೆ ಮಾಡುತ್ತಿದ್ದ.

ಆಲಿವರನು ತಿಂಡಿ ತಿಂದುದಾಯಿತು. ಅದಾದ ಮೇಲೆ ಆ ಹುಡುಗ "ಏನು? ಲಂಡನ್ನಿಗೋ?" ಎಂದ.

"ಹೌದು."

"ಅಲ್ಲಿ ಯಾರಾದರೂ ಇದ್ದಾರೊ?"

"ಇಲ್ಲ."

"ಏನಾದರೂ ಹಣವಿದೆಯೊ?"

"ಇಲ್ಲ."

"ಓ! ಹೋ!" ಎಂದು ಆ ಹುಡುಗ ನೀಳವಾಗಿ ಒಂದು ಸಿಳ್ಳು

ಹಾಕಿ, ತನ್ನ ಕೈಗಳನ್ನು ಜೇಬಿನಲ್ಲಿ ಇನ್ನೂ ಇಳಿಯಬಿಟ್ಟು, ಪುನಃ "ಓ! ಹೋ!" ಎಂದ.

ಆಲಿವರ್ ಅವನ ಮುಖ ನೋಡಿ, "ನೀನು ಇರುವುದು ಎಲ್ಲಿ? ಲಂಡನ್ನೊ?" ಎಂದು ಕೇಳಿದ.

"ಹೌದು, ಲಂಡನ್ನೆ; ನಾನು ಲಂಡನ್ನಿನಲ್ಲಿ ಇದ್ದಾಗ" ಎಂದು ಅವನು ಹೇಳಿ, "ಅದಿರಲಿ. ಈ ರಾತ್ರೆ ನೀನು ಮಲಗುವುದು ಎಲ್ಲಿ?" ಎಂದ.

"ಎಲ್ಲಿಯೋ ದೇವರಿಗೆ ಗೊತ್ತು. ನಾನು ನಮ್ಮ ಹಳ್ಳಿಯನ್ನು ಬಿಟ್ಟ ದಿವಸದಿಂದ ಇಂದಿನವರೆಗೆ ಆಕಾಶದ ಕೆಳಗಿನ ಬಯಲೇ ನನಗೆ ಗತಿ" ಎಂದ, ಆಲಿವರ್.

"ಹಾಗಾದರೆ, ಈ ರಾತ್ರೆ ನೀನು ಎಲ್ಲಿ ಮಲಗುವೆ ಎಂಬುದು ನನಗೆ ಗೊತ್ತು. ನೀನೇನೂ ಚಿಂತೆ ಮಾಡಬೇಲಿ. ನಾನು ಈ ರಾತ್ರೆ ಹೇಗೂ ಲಂಡನ್ನಿಗೆ ಹೋಗಬೇಕಾಗಿದೆ. ಅಲ್ಲಿ ನನ್ನ ಸ್ನೇಹಿತನಾದ ಒಬ್ಬ ಗೃಹಸ್ಥ ಇದ್ದಾನೆ. ಅವನಿಗೆ ಹೇಳಿ, ಅವನ ಮನೆಯಲ್ಲೇ ನಿನಗೆ ಮಲಗಲು ಸ್ಥಳ ಕೊಡಿಸುತ್ತೇನೆ. ನೀನೇನೂ ಚಿಂತೆ ಮಾಡಬೇಡ. ಈ ಹೊತ್ತಿನಿಂದ ನಿನ್ನ ಊಟ, ನಿನ್ನ ನಿದ್ದೆ ಇವುಗಳ ಭಾರವನ್ನು ನನಗೆ ಬಿಟ್ಟುಬಿಡು" ಎಂದು ಅವನು ಹೇಳಿದ.

ಆಲಿವರನಿಗೆ ಆಕಾಶವೇ ಕೈಗೆ ಎಟುಕಿದ ಹಾಗಾಯಿತು. "ಊಟವೆಲ್ಲಿ? ನಿದ್ರೆಯೆಲ್ಲಿ?" ಎಂದು ಕೊರಗುತ್ತಿದ್ದವನಿಗೆ ಅನಾಯಾಸವಾಗಿ ಕೂಳೂ ನೆರಳೂ ದೊರಕಿತು. ಆಲಿವರನಿಗೆ ತನ್ನ ಈ ಹೊಸ ಪರಿಚಯದವನ ಮೇಲೆ ತುಂಬ ವಿಶ್ವಾಸವುಂಟಾಯಿತು. ಸ್ವಲ್ಪ ಹೊತ್ತಿನೊಳಗಾಗಿಯೇ ಅವರಿಬ್ಬರೂ ಬಹಳ ಹಳೆಯ ಸ್ನೇಹಿತರಂತೆ ಏನೂ ಮುಚ್ಚುಮರೆಯಿಲ್ಲದೆ ಮಾತನಾಡತೊಡಗಿದರು. ಆಲಿವರ್ ತನ್ನ ಕತೆಯೆಲ್ಲವನ್ನೂ ಅವನಿಗೆ ಬಿಚ್ಚಿ ಬಿಡಿಸಿ ಹೇಳಿದ. ಅವನು ಆಲಿವರನಿಗೆ ಹೇಳಿದ

ಸ್ವವೃತ್ತಾಂತದಿಂದ ಅವನ ಹೆಸರು ಜಾನ್ ಡಾಕಿನ್ಸ್ ಎಂದೂ, ಆದರೆ ತೀರ ಆಪ್ತರಾದವರು ಮಾತ್ರ ಅವನನ್ನು ಪ್ರೇಮದಿಂದ "ಕಳ್ಳಕೊರಮ" ಎಂದು ಕರೆಯುತ್ತಿದ್ದರೆಂದೂ ತಿಳಿಯಿತು.

ಜಾನ್ ಡಾಕಿನ್ಸ್ ಆಲಿವರನನ್ನು ಕರೆದುಕೊಂಡು ಲಂಡನ್ನಿಗೆ ಹೋದಾಗ ರಾತ್ರೆ ಹನ್ನೊಂದು ಗಂಟೆಯಾಗಿತ್ತು. ಅದೇಕೋ, ರಾತ್ರಿಯಾಗುವ ಮೊದಲು ಹಗಲಿರುವಾಗಲೇ ಲಂಡನ್ನಿನಲ್ಲಿ ಮುಖವಿಡಲು ಅವನು ಇಷ್ಟಪಡಲಿಲ್ಲ. ರಾತ್ರೆಯಾದಾಗಲೇ, ಬೀದಿಗಳೆಲ್ಲ ಕತ್ತಲೆಯಲ್ಲಿ ಮುಳುಗಿದಾಗಲೇ ಅವರು ಲಂಡನ್ನನ್ನು ಹೊಕ್ಕರು.

ಮುಂದೆ ಮುಂದೆ ಬುಡುಬುಡನೆ ನಡೆಹೋಗುತ್ತಿದ್ದ ಆ "ಕಳ್ಳಕೊರಮ"ನ ಹಿಂದೆಯೇ ಆಲಿವರ್ ಬೇಗಬೇಗ ಹೋದರೂ ಹೋಗುವ ದಾರಿಯ ಅಕ್ಕಪಕ್ಕಗಳನ್ನು ಅವನು ಗಮನಿಸದಿರಲಿಲ್ಲ. ಹಳ್ಳಿಯಲ್ಲಿ ತಾನು ಬೆಳೆದವನಾದರೂ ಕೂಡ, ಆಲಿವರ್, ಈ ಲಂಡನ್ನಿನಲ್ಲಿ ತಾನು ಓಡುವ ದಾರಿಯಲ್ಲಿ ಕಂಡಷ್ಟು ಕೊಳಕನ್ನು ಎಲ್ಲಿಯೂ ಕಂಡಿರಲಿಲ್ಲ. ಅದು ದಾರಿಯೇ ಅಲ್ಲ, ಅದು ಸಂದು, ಓಣಿ. ದಾರಿಯ ತುಂಬ ಕೊಳಕು, ಹೊಲಸು ವಾಸನೆ. ಅಲ್ಲಿ ಇಲ್ಲಿ ಹತ್ತಾರು ಸಣ್ಣಸಣ್ಣ ಅಂಗಡಿಗಳು ದಾರಿಯ ಎರಡೂ ಪಕ್ಕಗಳಲ್ಲಿ ಇದ್ದುವು. ಆ ಅಂಗಡಿ ಬೀದಿಯಲ್ಲಿ, ರಾತ್ರೆ ಹನ್ನೊಂದು ಗಂಟೆಯಾದರೂ ಕೂಡ, ಮಕ್ಕಳು ಹರಕುಹರಕಾಗಿ ಕೊಳೆಕೊಳೆಯಾಗಿ ಓಡಿಯಾಡುತ್ತಿದ್ದುವು. ಮನೆಗಳೊಳಗಿಂದ ರಚ್ಚೆ ಹಿಡಿದು ಅಳುತಿದ್ದ ಮಕ್ಕಳ ಧ್ವನಿ ಕೇಳಿಸುತ್ತಿತ್ತು.

ಇದನ್ನೆಲ್ಲಾ ಗಮನಿಸುತ್ತ ಜಾನ್ ಡಾಕಿನ್ಸನ ಹಿಂದೆ ಹರಿಯುತ್ತಿದ್ದ ಆಲಿವರ್ "ಹೀಗೇ ಹಿಂದಿರುಗಿ ಓಡಿಹೋಗಿಬಿಡಲೆ?" ಎಂದು ಒಂದು ಕ್ಷಣ ಚಿಂತಿಸಿದ. ಅವನ ಚಿಂತೆ ಒಂದು ನಿಶ್ಚಯಕ್ಕೆ ಬರುವುದರೊಳಗೆ ಮುಂದೆ ಹೋಗುತ್ತಿದ್ದ ಆ "ಕಳ್ಳಕೊರಮ" ಅವನ ತೋಳು ಹಿಡಿದು

ಎಡಗಡೆಗೆ ತಿರುಗಿಸಿ, ಒಂದು ಮನೆಯ ಬಾಗಿಲನ್ನು ತೆಗೆದು, ಆಲಿವರ ನನ್ನು ಒಳಕ್ಕೆ ಎಳೆದುಕೊಂಡು, ಪುನಃ ಬಾಗಿಲನ್ನು ಮುಚ್ಚಿದ.

ಒಳಗೆ ಕತ್ತಲೆ. ಆಲಿವರನಿಗೆ ದಾರಿ ಕಾಣದು. ಹಾಗೇ ಗೋಡೆ ಯನ್ನು ತಡವಿಕೊಂಡು, ತೋಳು ಹಿಡಿದ ಡಾಕಿನ್ಸನ್ನು ನಂಬಿಕೊಂಡು ಮುಂದೆ ನಡೆದ. ಮುಂದೆ ಒಂದು ಮುರುಕಲು ಮೆಟ್ಟಲು ಹತ್ತಿ ಮೇಲೆ ಹೋಗಬೇಕಾಗಿತ್ತು. "ಕಳ್ಳಕೊರವ"ನೇನೋ ಅಭ್ಯಾಸ ಬಲದಿಂದ ಬುಡುಬುಡನೆ ಮೇಲೆ ಹತ್ತಿದ. ಆಲಿವರನಿಗೆ ಮಾತ್ರ ಅದು ಕಷ್ಟಸಾಧ್ಯ ವಾಯಿತು. ಅಂತೂ ಇಂತೂ ಇಬ್ಬರೂ ಮೇಲೆ ಹತ್ತಿದರು.

ಅಲ್ಲಿ ಒಂದು ಕೋಣೆ. ಡಾಕಿನ್ಸ್ ಆ ಕೋಣೆಯ ಬಾಗಿಲನ್ನು ತೆಗೆದು ಆಲಿವರನನ್ನು ಒಳಕ್ಕೆ ಎಳೆದುಕೊಂಡು, ಬಾಗಿಲನ್ನು ಮುಚ್ಚಿದ. ಒಳಗಿನ ಗೋಡೆಗಳೂ ಛಾವಣಿಯೂ ಮಸಿ ಹಿಡಿದು ಕಪ್ಪುಬಣ್ಣಕ್ಕೆ ತಿರುಗಿತ್ತು. ಅಲ್ಲಿಯೇ ಬೆಂಕಿ ಹಚ್ಚಿದ ಒಂದು ದೊಡ್ಡ ಒಲೆ. ಅದರ ಮುಂದೆ ಒಂದು ಹಳೆಯ ಮುರುಕು ಮೇಜು. ಆ ಮೇಜಿನ ಮೇಲೆ ಒಂದು ಸಾರಾಯಿಯ ಸೀಸೆ. ಆ ಸೀಸೆಯಲ್ಲಿ ಸಿಕ್ಕಿಸಿದ್ದ ಒಂದು ಮಯಣದ ಬತ್ತಿ ಮಂಕಾಗಿ ಉರಿಯುತ್ತಿತ್ತು. ಅದರ ಬೆಳಕಿನಲ್ಲಿ ಒಂದೆರಡು ಮಣ್ಣಿನ ಲೋಟ, ಒಂದಿಷ್ಟು ರೊಟ್ಟಿ ಬೆಣ್ಣೆ, ಒಂದು ಕೊಳೆ ಒರಸದ ತಟ್ಟೆ—ಇಷ್ಟೂ ಗೋಚರವಾಯಿತು. ಬೆಂಕಿಯ ಮೇಲೆ ಒಂದು ಎಣ್ಣೆಯ ಬಾಣಲಿ, ಅದರಲ್ಲಿ ಏನೋ ಮಾಂಸದ ಚೂರುಗಳನ್ನು ಬೇಯಿಸು ತ್ತಿದ್ದರು. ಅದರ ವಾಸನೆ ಆ ಕೋಣೆಯ ತುಂಬ ಹರಡಿಕೊಂಡಿತ್ತು.

ಅಲ್ಲಿ ಮಾಂಸವನ್ನು ಕರಿಯುತ್ತಿದ್ದವನನ್ನು ಆಲಿವರ್ ನೋಡಿದ. ಮುಖವೆಲ್ಲಾ ಸುಕ್ಕುಗಟ್ಟಿಹೋಗಿದ್ದ ಆ ಮುದುಕನ ಕಣ್ಣು ನೋಡಿದರೆ ಕೊಲೆಪಾತಕನಿದ್ದ ಹಾಗೆ ಕಾಣಿಸುತ್ತಿತ್ತು. ಮುಖದ ಬಹು ಭಾಗವನ್ನು ದಟ್ಟವಾದ ಕೆಂಚುಕೂದಲು ಮುಸುಕಿಬಿಟ್ಟಿತ್ತು. ಅವನು ತೊಟ್ಟಿದ್ದ ಫ್ಲಾನಲ್ ನಿಲುವಂಗಿ ಎಣ್ಣೆಯ ಜಿಡ್ಡಿನಿಂದ ಕಿಮುಟ ಹಿಡಿದುಹೋಗಿತ್ತು.

ಅವನ ದೃಷ್ಟಿಯಲ್ಲಿ ಅರ್ಧ ಮಾತ್ರ ಕರಿಯುತ್ತಿದ್ದ ಬಾಣಲೆಯ ಕಡೆಗಿತ್ತು; ಉಳಿದ ಅರ್ಧ ಅಲ್ಲೇ ಪಕ್ಕದಲ್ಲಿ ಒಂದು ಹಗ್ಗದ ಮೇಲೆ ಹಾಕಿದ್ದ ಒಂದು ರಾಶಿ ಕರವಸ್ತ್ರಗಳ ಕಡೆಗಿತ್ತು.

ಆಲಿವರ್ ಹಾಗೇ ಕಣ್ಣು ಸುಳಿಸಿ ಕೋಣೆಯ ಸುತ್ತ ನೋಡಿದ. ನೆಲದ ಮೇಲೆ ನಾಲ್ಕಾರು ಗೋಣಿಯಚೀಲದ ಹಾಸಿಗೆಗಳನ್ನು ಅಸ್ತವ್ಯಸ್ತವಾಗಿ ಮುದುರಿ ಒಂದು ಕಡೆ ಗುಡ್ಡೆ ಹಾಕಿದ್ದರು. ಅಲ್ಲೇ ಅದರ ಆಚೆ ಒಂದು ಮೇಜಿನ ಸುತ್ತ ನಾಲ್ಕೈದು ಹುಡುಗರು ಗುಂಪು ಕುಳಿತಿದ್ದರು. ಅವರೆಲ್ಲರೂ ಸುಮಾರು ಜಾನ್ ಡಾಕಿನ್ಸನ ವಯಸ್ಸಿನವರೆ. ಆದರೂ ಅವರೆಲ್ಲರೂ ತುಂಬ ವಯಸ್ಸಾದವರ ಹಾಗೆ ಉದ್ದವಾದ ಹೊಗೆಸೊಪ್ಪಿನ ಚಿಲುಮೆಗಳನ್ನು ಸೇದುತ್ತ, ಮೇಜಿನ ಮೇಲೆ ಕಾಲು ಹಾಕಿಕೊಂಡು ಸಾರಾಯಿ ಕುಡಿಯುತ್ತ ಕುಳಿತಿದ್ದರು.

ಡಾಕಿನ್ಸ್ ಈ ಮಧ್ಯೆ ಆಲಿವರನ ಕೈಬಿಟ್ಟು ಆ ಮುದುಕನ ಹತ್ತಿರ ಏನೋ ಪಿಸುಮಾತನಾಡಿದ. ಮಿಕ್ಕವರೂ ಎದ್ದುಬಂದು ಅವನ ಸುತ್ತಲೂ ಮುತ್ತಿಕೊಂಡು ಅವನು ಹೇಳಿದುದನ್ನು ಕೇಳಿದರು. ಕೇಳಿ, ಆಲಿವರನ ಕಡೆ ತಿರುಗಿನೋಡಿ, ಹಲ್ಲು ಕಿರಿದರು.

ಮುದುಕ ತಾನೂ ಹಲ್ಲು ಕಿರಿಯುತ್ತ, ಕರಿಯುತ್ತಿದ್ದ ಬಾಡಿಗೆ ಚುಚ್ಚಿದ್ದ ಮುಳ್ಳನ್ನು ಹಿಡಿದ ಹಾಗೆಯೇ ಆಲಿವರನನ್ನು ದೃಷ್ಟಿಸಿದ.

ಡಾಕಿನ್ಸ್ "ಇವನೇ, ಫ್ಯಾಗಿನ್, ನನ್ನ ಸ್ನೇಹಿತ ಆಲಿವರ್ ಟ್ವಿಸ್ಟ್. ಆಲಿವರ್, ಇವನೇ ನಮಗೆ ಪರಮ ಆಪ್ತನಾದ ಫ್ಯಾಗಿನ್" ಎಂದು ಪರಸ್ಪರವಾಗಿ ಅವರಿಗೆ ಪರಿಚಯ ಮಾಡಿಕೊಟ್ಟ.

ಫ್ಯಾಗಿನ್ ಹಲ್ಲು ಕಿರಿದ. ಆಲಿವರನಿಗೆ ನಡು ಬಗ್ಗಿ ನಮಸ್ಕರಿಸಿದ. ಅವನ ಕೈಹಿಡಿದು ಕುಲುಕಿದ. "ಬರಬೇಕು, ಬರಬೇಕು. ನಿನ್ನ ನನ್ನ ಪರಿಚಯ ಇನ್ನೂ ಬೆಳೆಯಬೇಕು" ಎಂದ.

ಅನಂತರ ಫ್ಯಾಗಿನ್ ಡಾಕಿನ್ಸನನ್ನು ಕುರಿತು "ಕೊರಮ, ಎಲ್ಲಿ, ಆ

ಕರಿದಿರುವ ಬಾಡನ್ನು ಹೀಗೆ ತಾ. ಹಾಗೆಯೇ ಆ ಪೆಟ್ಟಿಗೆಯನ್ನು ಇಲ್ಲಿ ಎಳೆದುಕೊ. ಆಲಿವರ್ ಕುಳಿತುಕೊಳ್ಳಲಿ" ಎಂದು ಹೇಳಿ, ಅಲ್ಲಿ ಹಗ್ಗದ ಮೇಲೆ ಹಾಕಿದ್ದ ಕರವಸ್ತ್ರಗಳನ್ನು ಆಲಿವರ್ ಗಮನಿಸುವುದನ್ನು ಕಂಡು, "ಏನು ನೋಡುತ್ತಿದ್ದೀ, ಆಲಿವರ್? ಇಷ್ಟು ಕರವಸ್ತ್ರಗಳೇಕೆ ಎಂದು ಆಶ್ಚರ್ಯಪಡುತ್ತೀಯೇನು? ಅವುಗಳನ್ನೆಲ್ಲಾ ಒಗೆಯುವುದಕ್ಕೋಸ್ಕರ ಅಗಸನಿಗೆ ಹಾಕಬೇಕು. ಅಷ್ಟೆ" ಎಂದು ಹೇಳಿ, ಗಹಗಹಿಸಿ ನಕ್ಕನು.

"ಹೌದು, ಹೌದು. ಅಷ್ಟೆ" ಎಂದು ಅಲ್ಲಿದ್ದ ಆ ಹುಡುಗರೆಲ್ಲರೂ ತಲೆದೂಗಿ, ತಾವೂ ಗಹಗಹಿಸಿ ನಕ್ಕರು.

ಆಲಿವರ್ ತನ್ನ ಪಾಲಿನದನ್ನು ತೆಗೆದುಕೊಂಡು ತಿಂದ. ನೀರಿನಲ್ಲಿ ಏನೋ ಬೆರಸಿ ಅವರು ಕೊಟ್ಟುದನ್ನು ಅವರು ಹೇಳಿದ ಹಾಗೆ ಒಂದೇ ಗುಟುಕಿಗೆ ಕುಡಿದ. ಅದನ್ನು ಕುಡಿದ ಎರಡೇ ಎರಡು ಕ್ಷಣಗಳಲ್ಲಿ ಅವನಿಗೆ ಒಂದು ತರಹ ಜಂಪು ಬಂತು. ಯಾರೋ ತನ್ನನ್ನು ಹಿಡಿದೆತ್ತಿ ತಾನು ಹಿಂದೆ ನೋಡಿದ್ದ ಗೋಣಿಯ ಚೀಲದ ಹಾಸಿಗೆಯ ಮೇಲೆ ಮಲಗಿಸಿದ ಹಾಗಾಯಿತು. ಅನಂತರ ಏನಾಯಿತೋ ಅವನಿಗೆ ತಿಳಿಯಲಿಲ್ಲ; ಅಂಥ ಗಾಢನಿದ್ರೆ ಬಂದುಬಿಟ್ಟಿತು.

ಆಲಿವರ್ ಬೆಳಗ್ಗೆ ಎಚ್ಚರಗೊಂಡು ಕಣ್ಣು ಬಿಟ್ಟಾಗ ಆ ಕೋಣೆಯಲ್ಲಿ ಹಿಂದಿನ ರಾತ್ರೆ ಇದ್ದವರು ಯಾರೂ ಕಾಣಲಿಲ್ಲ. ಫ್ಯಾಗಿನ್ ಒಬ್ಬ ಮಾತ್ರ ಒಲೆಯ ಮುಂದೆ ಕುಳಿತು ಕಾಫಿ ಕಾಯಿಸುತ್ತಿದ್ದ.

ಆಲಿವರ್ ಏಳಬಹುದೋ ಬಾರದೋ ಎಂದುಕೊಂಡು, "ಏಳಬಹುದೆ?" ಎಂದು ಫ್ಯಾಗಿನ್ನನ್ನು ಕೇಳಿದ.

"ಏಳಪ್ಪ, ಏಳು" ಎಂದ ಫ್ಯಾಗಿನ್.

ಆಲಿವರ್ ಎದ್ದ. ಎದ್ದು, ಮುಖ ತೊಳೆದುಕೊಂಡ. ಆ ವೇಳೆಗೆ ಕಳ್ಳಕೊರಮ ಬಂದ. ಅವನ ಜೊತೆಯಲ್ಲಿ ಇನ್ನೊಬ್ಬ ಹುಡುಗ ಇದ್ದ.

ಆ ಚುರುಕಾಗಿದ್ದ ಹುಡುಗನ ಹೆಸರು ಚಾರ್ಲಿ ಬೇಟ್ಸ್ ಎಂದು. ಕೊರವು ಆಲಿವರನಿಗೆ ಅವನ ಪರಿಚಯ ಮಾಡಿಕೊಟ್ಟ.

ಪರಸ್ಪರ ಪರಿಚಯವಾದ ಮೇಲೆ ಅವರು ನಾಲ್ವರೂ ಬೆಳಗಿನ ತಿಂಡಿಗೆ ಕುಳಿತರು. ಬಿಸಿಬಿಸಿ ರೊಟ್ಟಿ, ಬಿಸಿಬಿಸಿ ಕಾಫಿ, ಮಾಂಸಗಳನ್ನು ತೃಪ್ತಿಯಾಗುವಂತೆ ತಿಂದರು.

ಅನಂತರ ಫ್ಯಾಗಿನ್ ಆಲಿವರನ ಕಡೆಗೆ ತುಂಟನಗು ಚೆಲ್ಲುತ್ತಾ ಕೊರವುನನ್ನು ಕುರಿತು "ಏನು, ಕೊರವು? ನೀವು ಬೆಳಗ್ಗೆ ಎಲ್ಲೆಲ್ಲಿ ಹೋಗಿದ್ದಿರಿ?" ಎಂದು ಕೇಳಿದ.

"ಏನು, ಅಲ್ಲಿ, ಇಲ್ಲಿ, ಎಲ್ಲೆಲ್ಲೂ ಹೋಗಿದ್ದೆವು" ಎಂದರು, ಅವರು.

"ಏನು ಕೆಲಸ ಬಹಳ ಕಷ್ಟವಾಗಿತ್ತೊ?"

"ಬಹಳ!" ಎಂದ ಕೊರವು.

"ತುಂಬ!" ಎಂದ ಬೇಟ್ಸ್.

"ಭಲಾ! ಭೇಷ್! ನೀನು ಏನು ಸಂಪಾದಿಸಿದೆ, ಕೊರವು?" ಎಂದು ಫ್ಯಾಗಿನ್ ಕೇಳುವಾಗ ಅವನ ಕಣ್ಣು ದುರಾಸೆಯಿಂದ ಮಿನುಗಿದುವು.

"ಏನು, ಒಂದೆರಡು ದುಡ್ಡಿನ ಚೀಲ, ಅಷ್ಟೆ."

"ದೊಡ್ಡದೊ? ಚಿಕ್ಕದೊ?" ಎಂದು ಫ್ಯಾಗಿನ್ ಕೇಳಿದಾಗ ಅವನ ಬಾಯಲ್ಲಿ ಜೊಲ್ಲು ಸುರಿಯುತ್ತಿತ್ತು.

"ಇದೋ!" ಎನ್ನುತ್ತಾ ಕೊರವು ಎರಡು ಚೀಲಗಳನ್ನು ಜೇಬಿನಿಂದ ತೆಗೆದು ಫ್ಯಾಗಿನ್ನಿನ ಕೈಯಲ್ಲಿಟ್ಟ. ಅವುಗಳಲ್ಲಿ ಒಂದು ಚೀಲ ಕೆಂಪು, ಇನ್ನೊಂದು ಹಸುರು.

ಫ್ಯಾಗಿನ್ ಅವು ಎರಡನ್ನೂ ಎರಡು ಅಂಗೈಯಲ್ಲಿಟ್ಟು ತೂಗಿ ನೋಡಿ, "ಉಹುಂ, ಸಾಲದು. ತೂಕ ಏನೇನೂ ಸಾಲದು." ಎಂದು, ಚೀಲಗಳನ್ನು ಬಿಚ್ಚಿ ಒಳಗಡೆ ನೋಡಿ, "ಆಹಾ! ಚಿಂತೆಯಿಲ್ಲ. ಒಳ

ಭಾಗ ತುಂಬಾ ಅಚ್ಚುಕಟ್ಟಾಗಿ ಬಹಳ ಮುದ್ದಾಗಿದೆ" ಎಂದು ಮೆಚ್ಚಿದನು.

ಅನಂತರ ಚಾರ್ಲಿಬೇಟ್ಸ್‌ನ ಕಡೆಗೆ ತಿರುಗಿ, "ಏನಪ್ಪಾ, ನೀನೇನು ತಂದಿದ್ದೀ?" ಎಂದ.

"ನಾನೇ!" ಎನ್ನುತ್ತ ಬೇಟ್ಸ್ ತನ್ನ ಜೇಬಿನಿಂದ ನಾಲ್ಕು ದೊಡ್ಡ ಕರವಸ್ತ್ರಗಳನ್ನು ಹೊರಗೆಳೆದು ಫ್ಯಾಗಿನ್ನಿನ ಕೈಗೆ ಕೊಟ್ಟ.

ಫ್ಯಾಗಿನ್ ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಪರೀಕ್ಷಿಸಿ, "ತುಂಬ, ತುಂಬ ಚೆನ್ನಾಗಿದೆ. ಸರಿಯಾದದ್ದನ್ನೇ ಆರಿಸಿ ಹಾರಿಸಿದ್ದೀಯೆ. ತುಂಬ ಚೆನ್ನಾಗಿದೆ. ಇದರ ಮೂಲೆಗಳಲ್ಲಿರುವ ಹೆಸರಿನಕ್ಷರಗಳನ್ನು ಮಾತ್ರ ಸೂಜಿಯಿಂದ ಕಿತ್ತುಹಾಕಬೇಕು. ಇರಲಿ. ಅದನ್ನು ಆಲಿವರನಿಗೆ ಕಲಿಸಿಕೊಡೋಣ" ಎಂದು ತನಗೆ ತಾನೇ ಮಾತನಾಡಿಕೊಳ್ಳುತ್ತ, "ಏನು ಆಲಿವರ್? ಕಲಿಯುತ್ತೀಯಾ?" ಎಂದು ಅವನ ಕಡೆ ತಿರುಗಿ ಕೇಳಿದ.

ಆಲಿವರ್ ಕೃತಜ್ಞತೆಯಿಂದ "ನೀವು ಕಲಿಸಿಕೊಟ್ಟರೆ ಅಗತ್ಯವಾಗಿ ಕಲಿಯುತ್ತೇನೆ" ಎಂದ.

"ನೋಡು ಮಗು, ನಮ್ಮ ಚಾರ್ಲಿ ಬೇಟ್ಸ್ ಮಾಡುವ ಹಾಗೆ ಸುಲಭವಾಗಿ ಇಂತಹ ಕರವಸ್ತ್ರಗಳನ್ನು ಮಾಡಿ ತರಲು ನಿನಗೆ ಆಸೆಯಿಲ್ಲವೆ?" ಎಂದ ಫ್ಯಾಗಿನ್.

"ನೀವು ನನಗೂ ಕಲಿಸಿಕೊಟ್ಟರೆ ನಾನೂ ಮಾಡುತ್ತೇನೆ" ಎಂದು ಆಲಿವರ್ ಕೊರಮನ ಮುಖ ನೋಡಿದ.

ಕೊರಮ ಮೊದಲು ಏನೂ ಹೇಳಲಿಲ್ಲ. ಅನಂತರ ಆಲಿವರನ ತಲೆ ಗೂದಲನ್ನು ಅವನ ಮುಖದ ಮೇಲೆ ಮುಚ್ಚಿ, "ಕಲಿಯುವೆಯಂತೆ. ಕಲಿಯುವೆಯಂತೆ" ಎಂದ.

ಆಲಿವರ್ ತನ್ನ ಕೆದರಿದ ಕೂದಲನ್ನು ಸರಿಪಡಿಸಿಕೊಳ್ಳುತ್ತಿದ್ದಾಗ ಫ್ಯಾಗಿನ್ ಕೊರಮನ ಕೈಯಲ್ಲೂ ಚಾರ್ಲಿಯ ಕೈಯಲ್ಲೂ ಸ್ವಲ್ಪ ಹಣ ಕೊಟ್ಟು, ಬೆನ್ನು ತಟ್ಟಿ ಅವರನ್ನು ಕಳುಹಿಸಿದ.

## ಆಲಿವರ್ ಕಲಿತ ವಿದ್ಯೆ

ಅವರು ಹೊರಟುಹೋದ ಬಳಿಕ ಫ್ಯಾಗಿನ್ ಆಲಿವರನನ್ನು ಕುರಿತು "ನೋಡಿದೆಯ, ಮಗು? ಅವರು ಮಾಡುವ ಕೆಲಸ ಅವರು ಮಾಡು ತ್ತಾರೆ. ಕರ್ಚಿಗೆ ಕೈ ತುಂಬ ಹಣ ಸಿಕ್ಕುತ್ತದೆ. ಸುಖವಾದ ಬದುಕು ಎಂದರೆ ಇದೀಗ ಸುಖವಾದ ಬದುಕು" ಎಂದ.

"ಅವರು ಕೆಲಸ ಮಾಡಿದ್ದಾರೆಯೆ?" ಎಂದು ಆಲಿವರ್ ಕೇಳಿದ.

"ಆಹಾ! ಹೋಗುವಾಗ ದಾರಿಯಲ್ಲಿ ಎಲ್ಲಿ ಕೆಲಸ ಸಿಕ್ಕಿದರೂ ಅದನ್ನು ಬಿಡದೆ, ಎಚ್ಚರಿಕೆಯಿಂದ ಅದನ್ನು ಮುಗಿಸುತ್ತಾರೆ. ಅವರು ಮಾಡಿದ ಹಾಗೆ ಮಾಡಲು ನೀನೂ ಕಲಿಯಬೇಕು, ಆಲಿವರ್. ಅವರು ಏನು ಹೇಳಿದರೂ ಅದನ್ನು ನೀನು ಬಿಡದೆ ಮಾಡಬೇಕು, ಆಲಿವರ್. ಅವರ ಸಲಹೆಯನ್ನು ನೀನು ಯಾವಾಗಲೂ ಕೇಳಲು ಮರೆಯಬೇಡ. ಅದರಲ್ಲೂ, ಆ ಕೊರಮ ಇದ್ದಾನಲ್ಲ, ಅವನ ಮಾತು ಚಿನ್ನದ ತೂಕ" ಎಂದು ಆಲಿವರನ ಮನಸ್ಸಿಗೆ ತಟ್ಟುವಂತೆ ಹೇಳಿ, "ಆಲಿವರ್, ನನ್ನ ಜೇಬಿನಿಂದ ಏನಾದರೂ ವಸ್ತು ಇಣಿಕಿನೋಡುತ್ತಿದೆಯೆ, ನೋಡು" ಎಂದನು.

ಆಲಿವರ್ ನೋಡಿ "ಒಂದು ಕರವಸ್ತ್ರದ ಕೊನೆ ಕಾಣಿಸುತ್ತಿದೆ" ಎಂದನು.

"ನೋಡು, ಆಲಿವರ್. ನನಗೆ ಗೊತ್ತಾಗದ ಹಾಗೆ ನನ್ನ ಜೇಬಿ ನಿಂದ ಅದನ್ನು ತೆಗೆಯುವುದಕ್ಕಾಗುತ್ತದೆಯೆ, ನೋಡು" ಎಂದು ಫ್ಯಾಗಿನ್ ಹೇಳಿದ.

ಬೆಳಗ್ಗೆ ಕೊರಮನೂ ಅವನ ಸ್ನೇಹಿತನೂ ಆಟವಾಡುತ್ತಿದ್ದುದು ಆಲಿವರನಿಗೆ ಜ್ಞಾಪಕವಾಯಿತು. ಕೊರಮ ತನ್ನ ಜೇಬಿನಲ್ಲಿ ಒಂದು ಕರವಸ್ತ್ರವಿಟ್ಟುಕೊಂಡು ಕೋಣೆಯಲ್ಲಿ ತಿರುಗಾಡುತ್ತಿದ್ದ. ಚಾರ್ಲಿಬೇಟ್ಸ್ ಅವನ ಹಿಂದೆಯೇ ಹೊಂಚು ಹಾಕುತ್ತ, ಎಡಗೈಯಿಂದ ಅವನ ಜೇಬಿನ ಬುಡವನ್ನು ಮೆಲ್ಲಗೆ ಹಿಡಿದೆತ್ತಿ, ಬಲಗೈ ಬೆರಳುಗಳ ತುದಿಯಿಂದ ಆ ಕರವಸ್ತ್ರವನ್ನು ಹಾರಿಸಿದ. ಆಲಿವರ್ ಅದನ್ನು ನೆನೆದುಕೊಂಡು, ಚಾರ್ಲಿ ಬೇಟ್ಸನ್ನು ಅನುಕರಿಸಿ, ಫ್ಯಾಗಿನ್ನಿನ ಜೇಬಿನಲ್ಲಿದ್ದ ಕರವಸ್ತ್ರವನ್ನು ಅವನಿಗೆ ಗೊತ್ತೇ ಆಗದ ಹಾಗೆ ಎತ್ತಿಕೊಂಡ.

"ಎತ್ತಿಕೊಂಡೆಯ?" ಎಂದು ಫ್ಯಾಗಿನ್ ಕೇಳಿದ.

"ಇದೋ, ಇಲ್ಲಿ!" ಎಂದು ಆಲಿವರ್ ತನ್ನ ಕೈಯಲ್ಲಿದ್ದ ಕರವಸ್ತ್ರ ವನ್ನು ತೋರಿಸಿದ.

ಫ್ಯಾಗಿನ್ ಆಲಿವರನ ತಲೆಯನ್ನು ಸವರಿ, "ಅದು ಜಾಣತನ!" ಎಂದು ಪ್ರಶಂಸಿಸಿ, "ಆಲಿವರ್, ಇದುವರೆಗೆ ನಿನ್ನಂತಹ ಚುರುಕು ಹುಡುಗ ನನ್ನು ನಾನು ನೋಡಿಲ್ಲ. ಇದೋ, ಈ ಷಿಲ್ಲಿಂಗ್ ತೆಗೆದುಕೊ. ಆಲಿವರ್, ನೀನು ಹೀಗೆ ಇನ್ನೂ ಕಲಿತುಕೊಂಡರೆ ಮಹಾಪುರುಷನಾಗುತ್ತೀಯೆ. ಬಾ, ಮುಂದಿನ ಪಾಠ ಹೇಳಿಕೊಡುತ್ತೇನೆ. ಕರವಸ್ತ್ರದ ಮೂಲೆಯಲ್ಲಿರುವ ಹೆಸರುಗುರುತುಗಳನ್ನು ಸೂಜಿಯ ಮೊನೆಯಿಂದ ತೆಗೆಯುವುದು ಹೇಗೆ ಎಂಬುದನ್ನು ಕಲಿಸಿಕೊಡುತ್ತೇನೆ" ಎಂದ.

ಅಂದು ಫ್ಯಾಗಿನ್ನಿನ ಗುರುಶಾಲೆಯಲ್ಲಿ ಆಲಿವರನ ವ್ಯಾಸಂಗ ಪ್ರಾರಂಭ ವಾಯಿತು. ಕೊರಮನೇ ಮೊದಲಾದವರು ಹೊರಗೆ ಹೋಗಿ ಸುತ್ತಾಡಿ ಕೊಂಡು ಬರುವಾಗ ಕೈತುಂಬ ಕರವಸ್ತ್ರಗಳನ್ನು ತರುವರು. ಅವರು ತಂದುದರ ಮೂಲೆಯಲ್ಲಿದ್ದ ಹೆಸರುಗುರುತುಗಳನ್ನು ಆಲಿವರ್ ತೆಗೆದು ಹಾಕುವನು.

ಹೀಗೆ ಹಲವು ದಿವಸ ಕಳೆಯಿತು. ಕಡೆಗೆ ಒಂದು ದಿನ, ಆಲಿವರನಿಗೆ

ಬಾಗಿಲು ಮುಚ್ಚಿದ ಕೋಣೆಯೊಳಗೇ ಇದ್ದೂ ಇದ್ದೂ ಬೇಜಾರಾಗಿ, ಉಳಿದವರೊಡನೆ ತಾನು ಹೊರಗೆ ಹೋಗಿ ಕೆಲಸ ಮಾಡಿಕೊಂಡು ಬರುವುದಕ್ಕೆ ಅವಕಾಶ ಕೊಡಬೇಕೆಂದು ಫ್ಯಾಗಿನ್ನನನ್ನು ಬೇಡಿಕೊಂಡ. ಪಾಪ, ಹೊರಗೆ ಹೋಗಿ ಮಾಡಿಕೊಂಡು ಬರುವಂತಹ ಕೆಲಸವೇನೆಂಬುದು ಆಲಿವರನಿಗೆ ಗೊತ್ತಿರಲಿಲ್ಲ.

ಒಂದು ದಿನ ಫ್ಯಾಗಿನ್ ಆಲಿವರನನ್ನು ಕರೆದು, ಅವನನ್ನು ಕೊರವ ಮತ್ತು ಚಾರ್ಲಿಯವರ ವಶಕ್ಕೆ ಒಪ್ಪಿಸಿ, "ಇವನನ್ನು ಕರೆದುಕೊಂಡು ಹೋಗಿ, ಜೋಪಾನವಾಗಿ ಕರೆದುಕೊಂಡು ಬನ್ನಿ. ಆಲ್ಲಿವರ್, ಅವರನ್ನು ಬಿಟ್ಟು ಎಲ್ಲೂ ಹೋಗಬೇಡ" ಎಂದು ಅವನನ್ನು ಕಳುಹಿಸಿಕೊಟ್ಟನು.

ಮೂವರೂ ದಿಗ್ವಿಜಯಕ್ಕೆ ಹೊರಡುವವರಂತೆ ಹೊರಟರು. ಕೊರವ ಎಂದಿನಂತೆ ಅಂಗಿಯ ತೋಳುಗಳನ್ನು ಮೇಲೆತ್ತಿ ಮಡಚಿ, ಕೈಯನ್ನು ಷರಾಯಿಯ ಜೇಬಿನಲ್ಲಿ ತುರುಕಿಕೊಂಡು ಹೊರಟ. ಬೇಟ್ಸ್ ಎರಡೂ ಕೈಗಳನ್ನು ಎರಡು ಜೇಬುಗಳಲ್ಲೂ ತುರುಕಿ ಕಾಲೆಳೆದುಕೊಳ್ಳುತ್ತ ಹೊರಟ. ಆಲ್ಲಿವರ್ ಅವರಿಬ್ಬರ ನಡುವೆ, ಎಲ್ಲಿಗೆ ಹೋಗುವೆನೆಂಬುದು ತಿಳಿಯದೆ, ತನಗೆ ಏನು ಕೆಲಸವೆಂಬುದು ಗೊತ್ತಿಲ್ಲದೆ, ಅವರು ಹೋದ ಕಡೆ, ಅವರು ತಿರುಗಿದ ಕಡೆ, ತಾನೂ ಹೋಗುತ್ತಿದ್ದ, ತಾನೂ ತಿರುಗುತ್ತಿದ್ದ.

ತಾವು ಹೋಗುತ್ತಿದ್ದ ನಿಧಾನವಾದ ನಡಿಗೆ ನೋಡಿ ಆಲಿವರನಿಗೆ "ಇದೇನಿದು? ಸೋಮಾರಿಗಳಂತೆ ಹೋಗುತ್ತಿದ್ದೇವೆ! ಇದು ಕೆಲಸ ಮಾಡುವ ಚುರುಕೆ? ಓಹೊ! ಇವರಿಬ್ಬರೂ ಕೆಲಸ ಮಾಡುತ್ತೇವೆಂದು ಆ ಮುದುಕನಿಗೆ ಸುಳ್ಳು ಹೇಳಿ ಮೋಸ ಮಾಡುತ್ತಾರೆ" ಎಂದುಕೊಂಡ.

ಆ ವೇಳೆಗೆ ಒಂದು ಓಣಿಯನ್ನು ಹಾಯ್ದು ದೊಡ್ಡ ಬೀದಿಗೆ ಬಂದರು. ಹೋಗುತ್ತಿದ್ದ ಹಾಗೆಯೇ ಕೊರವ ತಟಕ್ಕನೆ ನಿಂತು, ತನ್ನ ಜೊತೆಯವರಿಗೆ "ಶ್ಯಾ!" ಎಂದ.

ಆಲಿವರ್ ಬೆಚ್ಚಿ "ಏನಾಯಿತು?" ಎಂದ.

ಕೊರಮ ಪುನಃ "ಶ್ಯ!" ಎಂದು, ದೂರದ ಒಂದು ಅಂಗಡಿಯ ಹತ್ತಿರ ನಿಂತು ಏನೋ ಪುಸ್ತಕವನ್ನು ತಿರುವಿ ನೋಡುತ್ತಿದ್ದ ಒಬ್ಬ ಮುದುಕನನ್ನು ಬೆರಳಿನಿಂದ ತೋರಿಸಿ, "ಆವನನ್ನು ನೋಡಿದೆಯ?" ಎಂದ.

"ಯಾರು? ಆ ಮುದುಕನೆ? ಓ, ನೋಡಿದೆ" ಎಂದ ಆಲಿವರ್.

"ಅವನೇ!" ಎಂದ, ಕೊರಮ.

ಆಲಿವರನಿಗೆ ಏನೂ ಅರ್ಥವಾಗಲಿಲ್ಲ. ಒಮ್ಮೆ ಕೊರಮನ ಮುಖವನ್ನೂ ಒಮ್ಮೆ ಬೇಟ್ಸನ ಮುಖವನ್ನೂ ನೋಡಿದ. ಅವರ ಮುಖ ನೋಡಿದರೆ, "ಏನೂ ಮಾತಾಡಬೇಡ" ಎನ್ನುವ ಹಾಗಿತ್ತು.

ಅವರಿಬ್ಬರೂ ಮೆಲ್ಲಗೆ ಬೆಕ್ಕುಗಳ ಹಾಗೆ ಹೆಜ್ಜೆಯ ಸದ್ದು ಮಾಡದೆ ಮಾರ್ಗವನ್ನು ದಾಟಿದರು. ಆಲಿವರ್ ಅವರ ಹಿಂದೆಯೇ ಬಂದ. ಅವರಿಬ್ಬರೂ ಆ ಅಂಗಡಿಯ ಹತ್ತಿರವಿದ್ದ ಮುದುಕನ ಹಿಂದೆ ಬಂದು ಮುದುರಿಕೊಂಡು ನಿಂತರು. ಆಲಿವರ್ ಸ್ವಲ್ಪ ದೂರ ಅವರ ಹಿಂದೆ ನಡೆದು ಬಂದವನು, ಅವರ ವರ್ತನೆ ಏನೂ ಅರ್ಥವಾಗದೆ ಹಾಗೇ ಸ್ವಲ್ಪ ದೂರದಲ್ಲಿ ನಿಂತು ಆಶ್ಚರ್ಯದಿಂದ ಸುಮ್ಮನೆ ನೋಡುತ್ತಿದ್ದ.

ಮುದುಕ ಅಂಗಡಿಯಿಂದ ಒಂದು ಪುಸ್ತಕ ತೆಗೆದುಕೊಂಡು, ಅದರ ಹಾಳೆಗಳನ್ನು ತಿರುಗಿಸುತ್ತಾ ಓದಿ ನೋಡುತ್ತಿದ್ದ. ಅವನು ನಿಂತಿದ್ದ ರೀತಿ ನೋಡಿದರೆ, ಅವನಿಗೆ ಮೈಮೇಲೆ ಎಚ್ಚರವೇ ಇದ್ದಹಾಗಿರಲಿಲ್ಲ. ಅವನಿಗೆ ತಾನು ಹಿಡಿದಿದ್ದ ಪುಸ್ತಕದ ಹೊರತು ಬೇರೆ ಯಾವುದರ ಕಡೆಗೂ ಗಮನವಿರಲಿಲ್ಲ. ಆದ್ದರಿಂದ ಆ ಇಬ್ಬರು ಹುಡುಗರು ತನ್ನ ಹಿಂದೆ ಬಂದು ನಿಂತು ಮಾಡಿದ ಚೇಷ್ಟೆ ಅವನಿಗೆ ಗೊತ್ತಾಗಲಿಲ್ಲ.

ತನ್ನ ಜೊತೆಗಾರರಿಬ್ಬರೂ ಮಾಡಿದ ಕೆಲಸವನ್ನು ಕಂಡು ಆಲಿವರನ ಕಣ್ಣು ಭಯದಿಂದ ಬಟ್ಟಲುಬಟ್ಟಲಾಯಿತು. ಕೊರಮ ಆ ಮುದುಕನ ಜೇಬಿಗೆ ಕೈಹಾಕಿ ಒಂದು ಕರವಸ್ತ್ರ ಎಳೆದದ್ದನ್ನೂ ಅದನ್ನು ಅವನ

ಕೈಯಿಂದ ಚಾರ್ಲಿ ತೆಗೆದುಕೊಂಡದ್ದನ್ನೂ ಆ ಬಳಿಕ ಅವರಿಬ್ಬರೂ ಓಣಿಯಲ್ಲಿ ಬಿದ್ದು ಒಂದೇ ಉಸಿರಿಗೆ ಓಡಿದುದನ್ನೂ ಆಲಿವರ್ ದಿಗ್ಭ್ರಾಂತನಾಗಿ ನೋಡಿದ.



"ಕರವಸ್ತ್ರದ ಕಳವು"

ಆಗ ಅವನಿಗೆ ತಾನು ಫ್ಯಾಗಿನ್ನಿನ ಕೋಣೆಯಲ್ಲಿ ಹಗ್ಗದ ಮೇಲೆ ನೋಡಿದ ಕರವಸ್ತ್ರಗಳ ರಹಸ್ಯ ಒಂದು ಕ್ಷಣದಲ್ಲಿ ಅರ್ಥವಾಯಿತು. ಕೊರವು ಮುಂತಾದವರು ಫ್ಯಾಗಿನ್ನಿನಿಂದ ಏನು ಕಲಿಯುತ್ತಿದ್ದರು, ಅವರು ಪ್ರತಿದಿನವೂ ಮನೆ ಬಿಟ್ಟ ಮೇಲೆ ಏನು ಕೆಲಸ ಮಾಡುತ್ತಿದ್ದರೆಂಬುದೂ ಅವನಿಗೆ ತಿಳಿಯಿತು. ತಾನು ಯಾರ ಜೊತೆಗೆ ಸೇರಿದ್ದೆನೆಂಬು

ದನ್ನು ಜ್ಞಾಪಿಸಿಕೊಂಡು ಅವನ ಮೈ ಜುಂ ಎಂದಿತು. ಮೈ ಮುಖ ಎಲ್ಲ ಬಿಸಿಬಿಸಿಯಾಯಿತು. ಕಣ್ಣು ಕತ್ತಲೆ ಕಟ್ಟಿಕೊಂಡು ಬಂತು. ಇನ್ನು ತಾನು ಅಲ್ಲಿ ನಿಂತರೆ ಅಪಾಯ, ಎನ್ನಿಸಿತು. ಆ ಅವಸ್ಥೆಯಲ್ಲಿ ಆಲಿವರನ ಬುದ್ಧಿ ಸ್ತಿಮಿತ ತಪ್ಪಿಹೋಗಿ, ತನ್ನ ಜೊತೆಯವರು ತಪ್ಪಿಸಿ ಕೊಂಡು ಓಡಿಹೋದ ಓಣಿಯ ಕಡೆಗೇ ತಾನೂ ಓಡಿದ.

ಆಲಿವರನು ಓಡಬೇಕೆಂದು ಕಾಲು ಕಿತ್ತ ಗಳಿಗೆಯಲ್ಲೇ ಆ ಮುದುಕ, ಪುಸ್ತಕ ಓದುತ್ತಿದ್ದವನು, ಮುಖ ಒರಸಿಕೊಳ್ಳಬೇಕೆಂದು ಕರವಸ್ತ್ರಕ್ಕಾಗಿ ಜೇಬಿಗೆ ಕೈ ಹಾಕಿದ. ಅದು ಜೇಬಿನಲ್ಲಿ ದೊರಕದಿರಲು, ಎಲ್ಲಿ ಬಿದ್ದು ಹೋಯಿತೋ ಎಂದು ತಿರುಗಿನೋಡಿದ. ತಿರುಗಿದವನ ಕಣ್ಣಿಗೆ ಆಲಿವರ್ ಓಡುತ್ತಿದ್ದುದು ಕಾಣಿಸಿತು. ತಾನು ಕರವಸ್ತ್ರ ಕಳೆದುಕೊಂಡ ಸಮಯ ದಲ್ಲಿಯೇ ಒಬ್ಬ ಸಣ್ಣ ಭಿಕಾರಿ ಹುಡುಗ ಪರಾರಿಯಾಗುತ್ತಿದ್ದುದನ್ನು ನೋಡಿ, "ಇವನೇ ನನ್ನ ಕರವಸ್ತ್ರವನ್ನು ಕದ್ದಿರಬೇಕು! ಅದಕ್ಕೇ ಹೀಗೆ ಓಡುತ್ತಿದ್ದಾನೆ!" ಎಂದು ಅವನಿಗೆ ಆಲಿವರನ ಮೇಲೆ ಸಹಜವಾಗಿ ಸಂಶಯ ಬಂತು. ಸಂಶಯ ಬಂದೊಡನೆ "ಹಿಡಿ! ಹಿಡಿ! ಕಳ್ಳಾ!" ಎಂದು ಕೂಗಿಕೊಂಡು ಆ ಮುದುಕ ಹಿಡಿದ ಪುಸ್ತಕವನ್ನೂ ಹಾಗೇ ಹಿಡಿದುಕೊಂಡು ಆಲಿವರನನ್ನು ಬೆನ್ನಟ್ಟಿ ಓಡಿದ.

ಆ ಮುದುಕನ ಜೇಬಿನಿಂದ ಕರವಸ್ತ್ರವನ್ನು ಅಪಹರಿಸಿದ್ದ ಕೊರಮನೂ ಚಾರ್ಲಿಯೂ ಓಣಿಯಲ್ಲಿ ಓಡಿದವರಾದರೂ ಬಹು ದೂರ ಓಡಿರಲಿಲ್ಲ. ಅಲ್ಲೇ ದಾರಿಯ ಒಂದು ಅಂಗಡಿಯ ಬಾಗಿಲಿನಲ್ಲಿ ಅವಿತು ಕೊಂಡಿದ್ದರು. ಅವರು ಕರವಸ್ತ್ರವನ್ನು ಕದ್ದು ಓಡಿದ ಒಂದು ನಿಮಿಷದೊಳಗಾಗಿ ಆಮೇಲೆ ನಡೆದದ್ದೆಲ್ಲ ಆಗಿಹೋಯಿತು. ಆದ್ದರಿಂದ ಅವರು ಆಲಿವರನು ಓಡುವುದನ್ನೂ ಮುದುಕನು ಅವನ ಹಿಂದೆ ಅಟ್ಟಿ ಬರುವುದನ್ನೂ ಕಂಡರು. ಅಷ್ಟರಲ್ಲಿ "ಹಿಡಿ! ಹಿಡಿ! ಕಳ್ಳಾ!" ಎಂದು ಕೂಗುತ್ತಾ ಇನ್ನೂ ಐದಾರು ಜನ ಬೀದಿಯಲ್ಲಿ ಹೋಗುತ್ತಿದ್ದವರೂ

ಮುದುಕನ ಜೊತೆಗೆ ಸೇರಿದ್ದರು. ಆ ಗುಂಪನ್ನು ಕಂಡು, ಕೊರಮನೂ ಚಾರ್ಲಿಯೂ ತಾವೂ ಸಭ್ಯರಂತೆ "ಕಳ್ಳಾ! ಕಳ್ಳಾ!" ಎಂದು ಕೂಗುತ್ತ ಆ ಗುಂಪಿನ ಹಿಂದೆ ಓಡಿದರು.

ಆ ಕೂಗು ಕೇಳಿದೊಡನೆಯೇ ಅಂಗಡಿಯವನು ಅಂಗಡಿ ಬಿಟ್ಟು ಓಡಿದ. ರೊಟ್ಟಿಯವನು ಬುಟ್ಟಿ ಬಿಸುಟು ಓಡಿದ. ಮಾಂಸದವನು ಮಚ್ಚು ಎಸೆದು ಓಡಿದ. ಹಾಲಿನವನು ಪಾತ್ರೆ ಎತ್ತಿಹಾಕಿ ಓಡಿದ. ಹುಡುಗರು ಗೋಲಿ, ಬುಗುರಿ ಮರೆತು ಓಡಿದರು. ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸಗಳನ್ನು ಹಾಗೆಹಾಗೇ ಬಿಟ್ಟು ಆಲಿವರನನ್ನು ಅಟ್ಟಿ ಕೊಂಡು ಓಡಿದರು. ಕೂಗೋ ಕೂಗು, ಬೊಬ್ಬೆಯೋ ಬೊಬ್ಬೆ, ಅಬ್ಬರವೋ ಅಬ್ಬರ, ಹುಯಿಲೋ ಹುಯಿಲು. ಜನರ ಜೊತೆಗೆ ಬೀದಿಯ ನಾಯಿ ಗಳೂ ಸೇರಿಕೊಂಡವು.

ಕೊನೆಗೆ ಯಾವನೋ ಒಬ್ಬ ರೆಟ್ಟೆಯೆತ್ತಿ ಬೀಸಿದ. ಆಲಿವರ್ ಕೆಳಗೆ ಉರುಳಿದ. ಒಬ್ಬಿಬ್ಬರು ಅವನ ಮೇಲೆ ಬಿದ್ದು, ಏಳದ ಹಾಗೆ ಅವನನ್ನು ಹಿಡಿದರು. ಸುತ್ತ ಜನರ ಗುಂಪು ಸೇರಿತು. ಎಲ್ಲರೂ "ಏನು? ಏನು?" ಎನ್ನುವವರೆ, "ಯಾರು? ಯಾರು?" ಎನ್ನುವವರೆ.

"ದಾರಿ ಬಿಡಿರೊ!" ಎಂದನೊಬ್ಬ. "ದೂರ ನಿಲ್ಲಿರೋ! ಸ್ವಲ್ಪ ಗಾಳಿ ಬರಲಿ!" ಎಂದ ಇನ್ನೊಬ್ಬ. "ಗಾಳಿ ಏಕೆ ಅವನಿಗೆ? ತದುಕಿರೊ ಅವನನ್ನು ಹಿಡಿದು!" ಎಂದ ಮತ್ತೊಬ್ಬ. "ಎಲ್ಲಿ? ಆ ವಸ್ತ್ರ ಕಳೆದು ಕೊಂಡ ಮುದುಕ ಎಲ್ಲಿ?" ಎಂದ ಬೇರೊಬ್ಬ. "ಇದೋ, ಬಂದ. ಎಲ್ಲಿ, ಜಾಗ ಬಿಡಿ. ಬಿಡಿ" ಎಂದು ಕೆಲವರು ಕೂಗಿದರು. ಆ ಮುದುಕನಿಗೆ ದಾರಿ ಬಿಟ್ಟು, "ಬನ್ನಿ, ಸ್ವಾಮಿ. ಇಗೋ, ಹುಡುಗನನ್ನು ಓಡದ ಹಾಗೆ ಹಿಡಿದಿದ್ದೇವೆ" ಎಂದರು ಇನ್ನು ಕೆಲವರು.

ಮುದುಕ ಕೆಳಗೆ ಬಿದ್ದಿದ್ದ ಆಲಿವರನ್ನು ನೋಡಿದ. ಮೈಯೆಲ್ಲಾ

ಮಣ್ಣು, ದೂಳು; ಬಾಯೆಲ್ಲಾ ರಕ್ತ; ಆಲಿವರ್ ಬೇಟೆಗಾರರ ಕೈಗೆ ಸಿಕ್ಕಿಬಿದ್ದ ಪಶು ಬೆದರುವ ಹಾಗೆ ಸುತ್ತ ಬೆದರಿ ನೋಡುತ್ತಿದ್ದ.

"ಇವನೇಯೋ ಹುಡುಗ?" ಎಂದು ಒಬ್ಬ ಕೇಳಿದ.

"ಹಾಗೇ ಕಾಣುತ್ತೆ" ಎಂದು ಮುದುಕನೆಂದ.

"ಏನು ಸ್ವಾಮಿ, ಹಾಗೇ ಕಾಣುತ್ತೆ ಎಂದರೆ? ಹುಡುಗನನ್ನು ನೋಡಿದರೆ ಗೊತ್ತಾಗುವುದಿಲ್ಲವೆ?" ಎಂದು ಇನ್ನೊಬ್ಬ ಕೂಗಿದ.

ಮುದುಕ ಬಗ್ಗಿ ಆಲಿವರನನ್ನು ನೋಡಿ, "ಪಾಪ, ಬಾಯಲ್ಲಿ ರಕ್ತ ಬರುತ್ತಿದೆಯೆ!" ಎಂದ.

"ನನ್ನ ಏಟು ಎಂದರೆ, ರಕ್ತವೇ ಅಲ್ಲ, ಪ್ರಾಣವೇ ಹೋಗಬೇಕು" ಎಂದು ಒಬ್ಬ ಧಾಂಡಿಗ ಹಲ್ಲು ಕಿರಿಯುತ್ತಾ ಮುಂದೆ ಬಂದ.

"ಬಹುಶಃ ಏನಾದರೂ ಬಹುಮಾನ ಕೊಟ್ಟಾರು. ಕಳ್ಳನನ್ನು ಹಿಡಿದುಕೊಟ್ಟಿದ್ದೇನೆ" ಎಂದುಕೊಂಡು ಅವನು ಆಸೆಯಿಂದ ಮುಂದೆ ಬಂದ. ಆದರೆ ಆ ಮುದುಕ ಅವನನ್ನು ಅಸಹ್ಯದಿಂದ ಕಂಡು ಮುಖ ಸಿಂಡರಿಸಿಕೊಂಡ. ತನ್ನಿಂದ ಪಾಪ, ಹುಡುಗನಿಗೆ ಹೀಗಾಯಿತಲ್ಲಾ ಎಂದು ನಾಚಿಕೊಂಡು, ಎಲ್ಲಿಯಾದರೂ ಓಡಿಹೋಗಬೇ ಎಂದು ಅವನಿಗೆ ಎನ್ನಿಸಿತು.

ಆ ಮುದುಕ ಓಡಿಯೇ ಹೋಗುತ್ತಿದ್ದನೋ ಏನೋ, ಅಷ್ಟರಲ್ಲಿ ಒಬ್ಬ ಪೋಲೀಸಿನವನು ಆ ಜನರ ಗುಂಪನ್ನು ಸೀಳಿಕೊಂಡು ಬಂದು, "ಏನಿದು, ದೊಂಬಿ?" ಎಂದ.

ಜನ ಅವನು ಬಂದುದನ್ನು ಕಂಡು ಹಿಮ್ಮೆಟ್ಟಿತು. ಪೋಲೀಸಿನವನು ಬಗ್ಗಿ, ಆಲಿವರನ್ನು ಹಿಡಿದು, "ಬಾ" ಎಂದು ಒರಟಾಗಿ ಎಳೆದ.

ಆಲಿವರ್ "ನಾನಲ್ಲ, ಸ್ವಾಮಿ, ನಾನಲ್ಲ. ಬೇರೆ ಇಬ್ಬರು ಹುಡುಗರು. ನನ್ನಾಣೆಗೂ ನಾನಲ್ಲ" ಎಂದು ಕೈಮುಗಿದು ಬೇಡಿಕೊಂಡ.

"ಅವರು ಇಲ್ಲೇ ಎಲ್ಲೋ ಇರಬೇಕು" ಎಂದು ಸುತ್ತಲೂ ತಿರುಗಿ ನೋಡಿದ.

"ಅಲ್ಲೇನು ನೋಡುತ್ತೀ? ಅಲ್ಲಿ ಯಾರೂ ಇಲ್ಲ. ಕದ್ದವರು ನಿನ್ನ ಕಣ್ಣಿಗೆ ಬೀಳಬೇಕೆಂದು ಕಾಯ್ದುಕೊಂಡು ನಿಂತಿರುತ್ತಾರೆ, ಅಲ್ಲವೆ? ಬಾ, ಬಾ, ಸಾಕು" ಎಂದು ಪುನಃ ಆಲಿವರನನ್ನು ಹಿಡಿದೆಳೆದ.

ಪೋಲೀಸಿನವನು ಹೇಳಿದ ಮಾತೇನೂ ಸುಳ್ಳಲ್ಲ. ಆಲಿವರನ ಹಿಂದೆ ಓಡಿಬಂದ ಗುಂಪಿನ ಜೊತೆಯಲ್ಲಿ ಓಡಿಬಂದ ಕೊರಮನೂ ಚಾರ್ಲಿಯೂ ಆಗಲೇ ಹಿಂದೆ ನಿಂತು, ಮನೆಯ ದಾರಿ ಹಿಡಿದಿದ್ದರು. ಪೋಲೀಸಿನವನಿಗೆ ಅದು ಗೊತ್ತಿರಲಿಲ್ಲ. ಆದರೂ ಅವನು ಆಲಿವರನ್ನು ಅಣಕಿಸಲು ಆಡಿದ ಮಾತು ನಿಜವಾಗಿತ್ತು. ಅವರು ಅಲ್ಲಿ ಕಾಯ್ದು ನಿಂತಿರಲಿಲ್ಲ.

ಪೋಲೀಸಿನವನು ಆಲಿವರನ್ನು ಎಳೆದುದು ನೋಡಿ, ಆ ಮುದುಕ ದಯೆಯಿಂದ "ಮೆಲ್ಲಗಪ್ಪ, ಹುಡುಗನಿಗೆ ತುಂಬ ನೋಯಿಸಬೇಡ" ಎಂದ.

"ಅಯ್ಯೋ! ಅಯ್ಯೋ! ನಾನು ನೋಯಿಸಿಯೇನೆ!" ಎಂದು ಆ ಪೋಲೀಸಿನವನು ಎಳೆದ ರಭಸಕ್ಕೆ ಆಲಿವರನ ಅಂಗಿ ಹರಿದುಹೋಯಿತು. "ಬರುತ್ತೀಯೋ ಇಲ್ಲವೋ" ಎಂದು ಅವನು ಆಲಿವರನ್ನು ದರದರನೆ ದಾರಿಯುದ್ದಕ್ಕೂ ಎಳೆದುಕೊಂಡು ಹೋದ. ಕರವಸ್ತ್ರವನ್ನು ಕಳೆದು ಕೊಂಡ ಮುದುಕ "ಬೇಡ. ಬಿಟ್ಟುಬಿಡು" ಎಂದು ಎಷ್ಟು ಕೇಳಿ ಕೊಂಡರೂ ಅವನು ಕೇಳಲಿಲ್ಲ.

ಮುದುಕನೂ ಆಲಿವರನ ಜೊತೆಯಲ್ಲೆ ಪೋಲೀಸು ಠಾಣೆಗೆ ನಡೆ ದನು. ಜನರ ಗುಂಪೂ ಅವರ ಹಿಂದೆ ಹೊರಟಿತು. ಆದರೆ ಹತ್ತು ಹೆಜ್ಜೆ ಹೋಗುವುದರೊಳಗಾಗಿ ಅನೇಕರು ಹಿಂದೆ ಉಳಿದರು. ಹುಡುಗರು, ಮಕ್ಕಳು ಮಾತ್ರ ಇನ್ನೂ ಕೂಗಾಡಿಕೊಂಡೇ ಅವರನ್ನು ಹಿಂಬಾಲಿಸಿದರು.

## ಆಲಿವರನ ಹೊಸ ಸ್ನೇಹಿತ

ಪೋಲೀಸು ಠಾಣೆಯಲ್ಲಿದ್ದ ಅಧಿಕಾರಿಯ ಹೆಸರು ಫ್ಯಾಂಗ್. ಅವನಿಗೆ ತುಂಬ ಮುಂಗೋಪ. ಯಾರಾದರೂ ತಪ್ಪಿತಸ್ಥರನ್ನು ತನ್ನ ಮುಂದೆ ಎಳೆದು ತಂದರೆ, ಹಿಂದು ಮುಂದು ನೋಡದೆ, ಅವರಿಗೆ ತಿಂಗಳು ಗಟ್ಟಲೆ ಶಿಕ್ಷೆ ವಿಧಿಸುತ್ತಿದ್ದ.

ಇಂಥವನ ಎದುರಿಗೆ ಆಲಿವರನ್ನು ಎಳೆದು ತಂದು ನಿಲ್ಲಿಸಿದರು.

"ಏನು, ಹುಡುಗನ ಮೇಲೆ ಏನು ಆರೋಪ?" ಎಂದು ಫ್ಯಾಂಗ್ ಪೋಲೀಸಿನವನನ್ನು ಕೇಳಿದ.

ಅವನು ಉತ್ತರ ಕೊಡುವುದರೊಳಗಾಗಿ ಕರವಸ್ತ್ರ ಕಳೆದುಕೊಂಡ ಆ ಮುದುಕ "ಒಂದು ಮಾತು........" ಎಂದ.

ಅವನ ಮಾತನ್ನು ಕೇಳುವ ತಾಳ್ಮೆ ಫ್ಯಾಂಗಿಗೆ ಇರಲಿಲ್ಲ. "ನೀ ಯಾರು?" ಎಂದು ಮುಖ ಸಿಡುಕಿ, ಪೋಲೀಸಿನವನ ಕಡೆ ತಿರುಗಿದ.

ಪೋಲೀಸಿನವನು ವರದಿ ಒಪ್ಪಿಸಿದ ಮೇಲೆ, ಆಲಿವರನಿಗೆ ಮೂರು ತಿಂಗಳು ಕಠಿನ ಸಜ ವಿಧಿಸಿದರು.

"ಆದರೆ ಹುಡುಗ ತುಂಬ ನಿಶ್ಶಕ್ತಿಯಾಗಿದ್ದಾನಲ್ಲಾ" ಎಂದು ಮುದುಕ ಕನಿಕರದಿಂದ ಹೇಳಿದ.

"ಓ, ಅದೆಲ್ಲಾ ಒಂದು ಆಟ. ಇಂಥವರನ್ನು ನಾವು ದಿನವೂ ನೋಡುತ್ತಿದ್ದೇವೆ" ಎಂದ, ಫ್ಯಾಂಗ್.

ಇದೆಲ್ಲಾ ನಡೆಯುತ್ತಿರುವಾಗ ಆಲಿವರನಿಗೆ ಮೈಮೇಲೆ ಎಚ್ಚರವೇ ಇರಲಿಲ್ಲ. ನಿಶ್ಶಕ್ತಿಯಿಂದ ಹಾಗೇ ಸೊರಗಿ ಒರಗಿಕೊಂಡಿದ್ದ.

ಆ ವೇಳೆಗೆ ವಯಸ್ಸಾದ ಮನುಷ್ಯನೊಬ್ಬನು ತಲೆ ಕೆದರಿಕೊಂಡು ಅಲ್ಲಿಗೆ ಓಡಿಬಂದ. "ಸ್ವಾಮಿ, ಸ್ವಾಮಿ, ಈ ಹುಡುಗ ನಿರಪರಾಧಿ. ಇವನು ನಿರ್ದೋಷಿ" ಎಂದು ಕೂಗಿಕೊಂಡ.

"ನಿನಗೆ ಹೇಗೆ ಗೊತ್ತು? ನೀ ಯಾರು?" ಎಂದು ಫ್ಯಾಂಗ್ ಕೋಪದಿಂದ ಕೇಳಿದ.

"ನಾನು ಒಂದು ಪುಸ್ತಕದ ಅಂಗಡಿ ಇಟ್ಟಿದ್ದೇನೆ. ಅಲ್ಲಿಯೇ ಇವರು ನಿಂತು ಪುಸ್ತಕ ನೋಡುತ್ತಿದ್ದರು. ಇವರ ಜೇಬಿನಲ್ಲಿದ್ದ ಕರವಸ್ತ್ರವನ್ನು ಬೇರೆ ಇಬ್ಬರು ಹುಡುಗರು ಅಪಹರಿಸುವುದನ್ನು ನಾನು ನೋಡಿದೆ. ಈ ಹುಡುಗನೂ ಅಲ್ಲಿದ್ದ. ಆದರೆ ದೂರ ನಿಂತು ಗಾಬರಿಯಿಂದ ನೋಡುತ್ತಿದ್ದ."

"ಇದನ್ನೆಲ್ಲಾ ಮೊದಲೇ ಬಂದು ಏಕೆ ಹೇಳಲಿಲ್ಲ?" ಎಂದು ಫ್ಯಾಂಗ್ ರೇಗಿದ.

"ಅಂಗಡಿ ಬಿಟ್ಟು ಬರುವ ಹಾಗಿರಲಿಲ್ಲ. ಅಂಗಡಿ ನೋಡಿಕೊಳ್ಳುವವರು ಯಾರೂ ಇರಲಿಲ್ಲ. ಬಾಗಿಲಿಗೆ ಬೀಗ ಹಾಕಿಕೊಂಡು ಬರುವುದಕ್ಕೆ ಇಷ್ಟು ಹೊತ್ತಾಯಿತು" ಎಂದು ಅಂಗಡಿಯವನು ಹೇಳಿದ.

ಫ್ಯಾಂಗ್ ಅಸಹ್ಯದಿಂದ "ಇಷ್ಟು ವೇಳೆ ನಾವು ವಿಚಾರಿಸಿದ್ದೆಲ್ಲ ವ್ಯರ್ಥ. ಸರಿ, ಸರಿ. ಎಲ್ಲರೂ ಹೊರಡಿ. ಅಪರಾಧಿಯನ್ನು ಬಿಟ್ಟುಬಿಡಿ" ಎಂದು ಆಜ್ಞೆ ಮಾಡಿದನು.

ಆಲಿವರನ್ನು ಬಿಡುಗಡೆ ಮಾಡಿದರು. ಆದರೆ ಮೈಮೇಲೆ ಎಚ್ಚರವಿಲ್ಲದೆ ಮುದುರಿಕೊಂಡಿದ್ದ ಹುಡುಗ ಎಲ್ಲಿಗೆ ಹೋದಾನು? ಹೇಗೆ ಹೋದಾನು? ಪೋಲೀಸಿನವರಂತೂ ಅವನನ್ನು ಎತ್ತಿಕೊಂಡು ಹೋಗಿ, ಪೋಲೀಸು ಠಾಣೆಯ ಹೊರಗೆ ಬೀದಿಯ ಒಂದು ಅಂಚಿನಲ್ಲಿ ಮಲಗಿಸಿ ಬಿಟ್ಟರು.

ಕರವಸ್ತ್ರವನ್ನು ಕಳೆದುಕೊಂಡ ಮುದುಕ ಆಲಿವರನ ದೀನಾವಸ್ಥೆಯನ್ನು ನೋಡಿದ. ಅವನಿಗೆ ತುಂಬ ಕನಿಕರವಾಯಿತು. ದಾರಿಯಲ್ಲಿ ಹೋಗುತ್ತಿದ್ದ ಒಂದು ಕುದುರೆಗಾಡಿಯನ್ನು ಕರೆದು, ಅದರಲ್ಲಿ ಆಲಿವರನ್ನು ಎತ್ತಿ ಮಲಗಿಸಿಕೊಂಡು, ತಾನೂ ಹತ್ತಿ ಕುಳಿತುಕೊಂಡ.

"ನಾನೂ ಬರಲೆ?" ಎಂದು ಆ ಪುಸ್ತಕದ ಅಂಗಡಿಯುವನು ಕೇಳಿದ.

"ಓಹೋ, ಅಗತ್ಯವಾಗಿ ಬರಬೇಕು" ಎಂದು ಆ ಮುದುಕ ಅವನನ್ನೂ ಒಳಗೆ ಕುಳ್ಳಿರಿಸಿಕೊಂಡ. ಗಾಡಿ ಮುಂದೆ ಹೋಯಿತು.

ಪುಸ್ತಕದ ಅಂಗಡಿಯಲ್ಲಿ ಕರವಸ್ತ್ರವನ್ನು ಕಳೆದುಕೊಂಡು ಆಲಿವರನಿಗೆ ಅಕಾರಣಬಂಧುವಾಗಿ ಒದಗಿದವನ ಹೆಸರು ಬ್ರೌನ್ಲೊ. ಕುದುರೆಯ ಗಾಡಿ ಅವನ ಮನೆಯ ಬಾಗಿಲಿನಲ್ಲಿ ನಿಂತಿತು. ಗಾಡಿ ನಿಂತೊಡನೆ ಮನೆಯೊಳಗಿಂದ ಜನ ಬಂದರು. ಏನೆಂದು ವಿಚಾರಿಸಿಕೊಂಡರು. ಬೇಗ ಒಳಗೆ ಒಂದು ಹಾಸಿಗೆ ಹಾಸಿ, ಆಲಿವರನ್ನು ಮೃದುವಾಗಿ ಎತ್ತಿ ತಂದು, ಅಲ್ಲಿ ಮಲಗಿಸಿದರು.

ಆಲಿವರ್ ಹಾಗೇ ಅನೇಕ ದಿನಗಳು ಕಣ್ಣುಬಿಟ್ಟು ಕೂಡ ನೋಡಲು ಶಕ್ತಿಯಿಲ್ಲದೆ ಮಲಗಿದ್ದ. ಆ ಮನೆಯುವರೆಲ್ಲರೂ ಅತ್ಯಂತ ಕರುಣೆಯಿಂದ ತನ್ನನ್ನು ಆದರಿಸುತ್ತಿದ್ದರೆಂಬುದು ಕೂಡ ಅವನಿಗೆ ತಿಳಿಯದು. ಅಷ್ಟು ಬಾಹ್ಯಜ್ಞಾನಶೂನ್ಯನಾಗಿ ಆಲಿವರ್ ಅನೇಕ ದಿನ ಮಲಗಿದ್ದ.

ಹೀಗೆ ಅನೇಕ ದಿನಗಳು ಜ್ವರದಿಂದಲೂ ನಿಶ್ಶಕ್ತಿಯಿಂದಲೂ ಸರಳಿ, ಒಂದು ದಿನ ಹಾಗೇ ಕಣ್ಣುಬಿಟ್ಟು, ತಾನು ಮಲಗಿದ್ದ ಕೊಠಡಿಯ ಸುತ್ತಲೂ ನೋಡಿ, ಕಾತರದಿಂದ "ನಾನು ಎಲ್ಲಿದ್ದೇನೆ? ಇದು ಯಾರ ಮನೆ? ನನ್ನ ಗೋಣಿಯ ಹಾಸಿಗೆ ಎಲ್ಲಿ?" ಎಂದು ಕ್ಷೀಣವಾದ ಸ್ವರದಲ್ಲಿ ಕೇಳಿದ.

ಅಲ್ಲೇ ಆಲಿವರನ ಹಾಸಿಗೆಯ ಪಕ್ಕದಲ್ಲೇ ಒಬ್ಬ ಮುದುಕಿ ಸೂಜಿ ಕೆಲಸ ಮಾಡುತ್ತಾ ಕುಳಿತಿದ್ದರು. ಅವಳು ಆಲಿವರನು ಏನೋ ಮಾತನಾಡಿದುದನ್ನು ಕೇಳಿ, ಹತ್ತಿರ ಬಂದು, ಅವನ ಹಣೆಯನ್ನು ನೇವರಿಸುತ್ತ "ಶ್ಶ್! ಮಾತನಾಡಬೇಡ, ಮಗು. ಮಾತನಾಡಿದರೆ ವೃಥಾ ಆಯಾಸವಾಗುತ್ತದೆ. ಸುಮ್ಮನೆ ಮಲಗಿಕೊ. ಏನೂ ಚಿಂತೆ ಮಾಡಬೇಡ" ಎಂದಳು.

ಮುದುಕಿ ಆಲಿವರನ ಮುಖ ಸವರಿದಳು. ಮುಖದ ಮೇಲೆ ಬಂದಿದ್ದ ತಲೆಕೂದಲುಗಳನ್ನು ಸರಿಪಡಿಸಿದಳು. ಅವಳ ಮುಖ, ಅವಳ ಮಾತು, ಅವಳ ಸ್ಪರ್ಶ ಎಲ್ಲವೂ ದಯೆಯಿಂದ ತುಂಬಿ ತುಳುಕುತ್ತಿತ್ತು. ಆಲಿವರ್ ಧೈರ್ಯ ಮಾಡಿ ಆ ಮುದುಕಿಯ ಮುದಿಕೈಗಳನ್ನು ತನ್ನ ಎರಡೂ ಕೈಗಳಿಂದ ಹಿಡಿದು ಕೆನ್ನೆಗೆ ಒತ್ತಿಕೊಂಡ.

ಮುದುಕಿಯ ಕಣ್ಣುಗಳಲ್ಲಿ ನೀರು ಒತ್ತಿಬಂತು. "ಅಯ್ಯೋ ಪಾಪ! ತಾಯಿ ಯಾರೋ! ನಾನು ಇಲ್ಲಿ ಕುಳಿತು ಇವನನ್ನು ನೋಡುವ ಹಾಗೆ ಇವನ ತಾಯಿಯೂ ನೋಡಿದ್ದರೆ ಎಷ್ಟು ಸಂತೋಷಪಟ್ಟುಕೊಳ್ಳುತ್ತಿದ್ದಳೋ!" ಎಂದುಕೊಂಡಳು.

ಆಲಿವರ್ ತನ್ನ ಎರಡು ಕೈಗಳನ್ನೂ ಜೋಡಿಸಿ ಮುಗಿದು, "ಬಹುಶಃ ಅವಳೂ ನೋಡುತ್ತಿದ್ದಾಳೆ, ಅಜ್ಜಿ. ಅವಳೂ ಸಂತೋಷಪಡುತ್ತಿದ್ದಾಳೆ, ಅಜ್ಜಿ" ಎಂದ.

"ಹಾಗೆಲ್ಲಾ ಮಾತನಾಡಬಾರದು. ಸುಮ್ಮನೆ ಮಲಗಿಕೊ, ಮಗು" ಎಂದಳು, ಆ ಮುದುಕಿ.

"ಇಲ್ಲ, ಅಜ್ಜಿ. ನಮ್ಮ ತಾಯಿ ಸತ್ತು, ಮೇಲೆ ಸ್ವರ್ಗದಲ್ಲಿದ್ದಾಳೆ. ಸ್ವರ್ಗದವರು ಸಾಮಾನ್ಯವಾಗಿ ತಮ್ಮ ಸುಖವನ್ನು ಬಿಟ್ಟು ಭೂಮಿಗೆ ಬರುವುದಿಲ್ಲ. ಆದರೆ ನನ್ನ ತಾಯಿ ಹಾಗಲ್ಲ, ಅಜ್ಜಿ. ನನಗೆ ಕಾಯಿಲೆ ಎಂದು ತಿಳಿದರೆ, ಆಕೆ, ಪಾಪ, ಎಷ್ಟು ದುಃಖಪಡುವಳೋ. ಅವಳು ಬರದೆ ಇರುವುದಿಲ್ಲ, ಅಜ್ಜಿ" ಎಂದು ಹೇಳಿ, ಅರೆ ಕ್ಷಣ ತಡೆದು, "ಆದರೂ ಅಜ್ಜಿ, ನನ್ನ ಸಂಕಟವನ್ನು ನೋಡಿದರೆ, ಅವಳು ತುಂಬ ಗೋಳಾಡಿಯಾಳು. ನನಗೆ ಕನಸಿನಲ್ಲಿ ಕೂಡ ಯಾವಾಗಲೂ ಅವಳ ನಗುಮುಖವೊಂದು ಹೊರತಾಗಿ ಬೇರೇನೂ ಕಾಣಿಸದು" ಎಂದ, ಆಲಿವರ್.

ಮುದುಕಿ ಏನೂ ಮಾತನಾಡಲಿಲ್ಲ. ಕಣ್ಣಿನಲ್ಲಿ ತೊಟ್ಟಿಡುತ್ತಿದ್ದ ಕಣ್ಣೀರನ್ನು ಹಾಗೇ ಒರಸಿಕೊಂಡು, "ಇದೋ, ಮಗು, ಈ ಔಷಧಿ

ಕುಡಿ" ಎಂದು ಒಂದು ಲೋಟದಲ್ಲಿ ಅವನಿಗೆ ಔಷಧ ಕುಡಿಸಿ, "ನೋಡು, ಇವತ್ತು ತುಂಬ ಮಾತನಾಡಿದ್ದೀಯೆ. ಹೀಗೆ ಆಯಾಸ ಮಾಡಿಕೊಂಡರೆ ಜ್ವರ ಪುನಃ ಮರುಕೊಳಿಸುತ್ತದೆ. ಸುಮ್ಮನೆ ಮಲಗಿಕೊ. ಅದು, ಜಾಣ!" ಎಂದು ಅವನಿಗೆ ಹೊದಿಸಿ, ಮಲಗಿಸಿದಳು.

ಆಲಿವರ್ ಸುಮ್ಮನೆ ಮಲಗಿಕೊಂಡ. ಅದಕ್ಕೆ ಎರಡು ಕಾರಣ ವಿತ್ತು. ಒಂದು, ತಾನು ಸುಮ್ಮನೆ ಮಾತನಾಡಿದರೆ ಆ ಮುದುಕಿಯ ಮನಸ್ಸಿಗೆ ನೋವಾಗುತ್ತದೆ ಎಂಬುದು ಒಂದು. ಅದಕ್ಕಿಂತ ನಿಜವಾದ ಕಾರಣವೆಂದರೆ: ಅದುವರೆಗೆ ಮಾತನಾಡಿದ್ದರಿಂದಲೇ ಅವನಿಗೆ ಆಯಾಸ ಅತಿಯಾಗಿತ್ತು. ಆದ್ದರಿಂದ ಮಲಗಿದೊಡನೆ ಹಾಗೆಯೇ ನಿದ್ರೆಯ ಜೊಂಪು ಹತ್ತಿತು.

ಸ್ವಲ್ಪ ಹೊತ್ತಿನಲ್ಲಿಯೇ ಅವನ ನಿದ್ರೆ ಭಂಗವಾಯಿತು. ತನ್ನನ್ನು ಮಲಗಿಸಿದ ಮುದುಕಿ ಹಾಸಿಗೆಯ ಹತ್ತಿರ ದೀಪ ಹಿಡಿದುಕೊಂಡು ನಿಂತಿದ್ದಳು. ಅವಳ ಹತ್ತಿರ ಇನ್ನು ಯಾವನೋ ಒಬ್ಬ ಹೊಸಬ, ಒಂದು ಕೈಯಲ್ಲಿ ಗಡಿಯಾರ ಹಿಡಿದುಕೊಂಡು, ಇನ್ನೊಂದು ಕೈಯಿಂದ ಆಲಿವರನ ನಾಡಿ ಪರೀಕ್ಷಿಸುತ್ತಿದ್ದ.

ಆಲಿವರ್ ಕಣ್ಣು ಬಿಟ್ಟುದನ್ನು ಕಂಡು, "ಜ್ವರ ಬಿಟ್ಟಿದೆ. ಅಲ್ಲವೆ, ಮಗು?" ಎಂದ, ಆ ವೈದ್ಯ.

"ಬಿಟ್ಟಿದೆ. ನಿಮ್ಮ ಕೃಪೆಯಿಂದ" ಎಂದ, ಆಲಿವರ್.

"ತುಂಬ ಒಳ್ಳೆಯದು. ಹಸಿವು ಏನಾದರೂ ಆಗುತ್ತದೆಯೆ?"

"ಇಲ್ಲ. ಏನೂ ಬೇಕಾಗಿಲ್ಲ."

"ನಿದ್ರೆ ಚೆನ್ನಾಗಿ ಬರುತ್ತದೆಯೊ?"

"ಅದೂ ಇಲ್ಲ."

"ಹಸಿವಿಲ್ಲ, ನಿದ್ರೆಯಿಲ್ಲ. ದಾಹ ಏನಾದರೂ ಆಗುತ್ತದೆಯೊ?"

"ಹೌದು. ತುಂಬ ದಾಹ."

"ಸರಿ, ಸರಿ. ಕೇಳಿದೆಯ ಅಜ್ಜಿ? ಹಸಿವಿಲ್ಲ, ನಿದ್ರೆಯಿಲ್ಲ, ತುಂಬ ದಾಹವಂತೆ. ಇವನಿಗೆ ಸ್ವಲ್ಪ ಟೀ ಕೊಡಬಹುದು. ಹಸಿವಾದರೆ ಸ್ವಲ್ಪ ರೊಟ್ಟಿ ಸುಟ್ಟು, ಬೆಣ್ಣೆ ಸವರಿ ಕೊಡಬಹುದು. ಇವನಿಗೆ ತುಂಬ ಹೊದಿಕೆ ಹೊದಿಸಬೇಡಿ. ಹಾಗೆಂದರೆ ಎಲ್ಲಿಯಾದರೂ ನೆಗಡಿ, ಶೀತ ಆದೀತು. ಸ್ವಲ್ಪ ಜೋಪಾನವಾಗಿ ನೋಡಿಕೊಳ್ಳಬೇಕು."

ವೈದ್ಯನು ಹೀಗೆಂದು ಆಲಿವರನಿಗೂ ಆ ಮುದುಕಿಗೂ ಧೈರ್ಯ ಹೇಳಿ ಹೊರಟುಹೋದನು.

ಆಲಿವರನಿಗೆ ಹಾಗೇ ನಿದ್ರೆ ಬಂತು. ರಾತ್ರಿ ಹನ್ನೆರಡು ಗಂಟೆಗೆ ಒಮ್ಮೆ ಎಚ್ಚರವಾಯಿತು. ಪುನಃ ಹಾಗೇ ಕಣ್ಣು ಮುಚ್ಚಿಕೊಂಡಿತು. ಬೆಳಗಾಗುವವರೆಗೂ ಹಾಗೇ ನಿದ್ರೆ ಮಾಡಿದ. ಬೆಳಗ್ಗೆ ಸ್ವಲ್ಪಸ್ವಲ್ಪವಾಗಿ ಸೂರ್ಯನ ಬೆಳಕು ಕೋಣೆಯಲ್ಲಿ ತುಂಬಿಕೊಳ್ಳುವುದನ್ನೇ ನೋಡುತ್ತ ಮಲಗಿದ. ಬರುಬರುತ್ತ ಗೋಡೆಯ ಮೇಲಿದ್ದ ಚಿತ್ರಗಳೂ ಅಲಂಕಾರವೂ ಸ್ಪಷ್ಟವಾಗುತ್ತ ಬಂತು. ಎಷ್ಟೋ ದಿನಗಳು ಆಲಿವರ್ ರಾತ್ರಿಯಾದೊಡನೆ 'ಬೆಳಗಿನ ವೇಳೆಗೆ ನಾನು ಸತ್ತುಹೋಗುತ್ತೇನೆ' ಎಂದು ಹೆದರಿಕೊಂಡಿದ್ದ. ಆದರೆ ಈ ದಿನ ಬೆಳಗಾಗುವ ವೇಳೆಗೆ ಆ ಹಿಂದಿನ ಹೆದರಿಕೆ ಮಾಯವಾಗಿ, 'ಇನ್ನು ನಾನು ಬದುಕುತ್ತೇನೆ' ಎಂಬ ಧೈರ್ಯ ಅವನಿಗೆ ಬಂತು. ಹಾಗೇ ಮಲಗಿಕೊಂಡ ಹಾಗೆಯೇ ದೇವರಿಗೆ ಕೃತಜ್ಞತೆಯನ್ನು ಸಮರ್ಪಿಸಿದ. ಹಾಗೇ ಪುನಃ ಗಾಢವಾದ ನಿದ್ರೆಯಲ್ಲಿ ಮುಳುಗಿದ. ಅವನಿಗೆ ತಿರುಗಿ ಎಚ್ಚರವಾಗುವ ವೇಳೆಗೆ ಆಗಲೇ ಮಧ್ಯಾಹ್ನವಾಗಿತ್ತು. ಮುಖದಲ್ಲಿ ಗೆಲವು ಸ್ವಲ್ಪಸ್ವಲ್ಪವಾಗಿ ಕೂಡಿಕೊಳ್ಳುತ್ತಿತ್ತು. ಆಲಿವರ್ ತನಗೆ ಒದಗಿದ್ದ ಗಂಡಾಂತರದಿಂದ ಪಾರಾದ.

ಅನಂತರ, ಮೂರು ದಿನ ಕಳೆದ ಮೇಲೆ, ಮೆತ್ತನೆಯ ದಿಂಬುಗಳು ಹಾಕಿದ ಕುರ್ಚಿಯಲ್ಲಿ ಕುಳಿತುಕೊಳ್ಳುವಷ್ಟು ಚೈತನ್ಯ ಅವನಿಗೆ ಬಂತು. ಆದರೆ ನಡೆದಾಡುವಷ್ಟು ತ್ರಾಣ ಕಾಲಿಗೆ ಇನ್ನೂ ಬಂದಿರಲಿಲ್ಲ. ಬರಿಯ

ಮೂಳೆ ಚಕ್ಕಳವಾಗಿ ಹುಲ್ಲಿನಂತೆ ಹಗುರವಾಗಿದ್ದ ಅವನನ್ನು ಆ ಮುದುಕಿಯೇ ಎತ್ತಿಕೊಂಡು, ಬೆಂಕಿಯ ಹತ್ತಿರ ಕುರ್ಚಿ ಹಾಕಿ ಕುಳ್ಳಿರಿಸುವಳು. ಅವನು ಚೇತರಿಸಿಕೊಂಡು ಸುಮುಖವಾದುದನ್ನು ಕಂಡು, ಆ ಮುದುಕಿ ಸಂತೋಷವನ್ನು ತಡೆಯಲಾರದೆ ಗಳಗಳನೆ ಅಳತೊಡಗಿದಳು.

ಆಲಿವರನು ಅವಳ ಅಳುವನ್ನು ಅರ್ಥಮಾಡಿಕೊಳ್ಳಲಾರದೆ ಸುಮ್ಮನೆ ಅವಳ ಮುಖ ನೋಡಿದ. ಅದಕ್ಕೆ ಅವಳು "ಏನೂ ಇಲ್ಲಪ್ಪ. ಏನೋ ಎದೆ ಹಗುರವಾಗಿ, ಸಂತೋಷವನ್ನು ತಡೆಯಲಾರದೆ ಕಣ್ಣಲ್ಲಿ ನೀರು ಬಂತು. ಸದ್ಯಃ ನೀನು ಇಷ್ಟರಮಟ್ಟಿಗೆ ಆದೆಯಲ್ಲ!" ಎಂದಳು.

"ನಿಮ್ಮೆಲ್ಲರ ದಯೆಯಿಂದ ನಾನು ಇಷ್ಟರಮಟ್ಟಿಗೆ ಆದೆ, ಅಜ್ಜಿ" ಎಂದ, ಆಲಿವರ್.

"ಆದಿರಲಿ, ಅದಿರಲಿ" ಎಂದು ಆ ಮುದುಕಿ ಎದ್ದು, "ಗಂಜಿ ಕುಡಿಯುವ ಹೊತ್ತಾಯಿತಲ್ಲವೆ? ಹೌದು. ಡಾಕ್ಟರ್ ಬೆಳಗ್ಗೆ ಬಂದಾಗ, ಈ ದಿನ ನಿನ್ನನ್ನು ನೋಡುವುದಕ್ಕೆ ಬ್ರೌನ್ಲೊ ಬರುವನೆಂದು ಹೇಳಿದ. ಆತನು ಬಂದಾಗ ನಿನ್ನ ಮುಖ ನಗುನಗುತ್ತಿರಬೇಡವೆ! ಕಾಯಿಲೆಯಾಗಿದ್ದ ನಿನ್ನನ್ನು ಕರೆದುಕೊಂಡು ಬಂದಾತ ನೀನು ಗುಣಮುಖವಾದುದನ್ನು ಕಂಡರೆ ಎಷ್ಟು ಸಂತೋಷಪಡುತ್ತಾನೊ!" ಎಂದು ಅವಳು ಗಂಜಿಯನ್ನು ಬಿಸಿಮಾಡಿ ತರಲು ಹೋದಳು.

## ಇದು ಯಾರು?

ಆ ಮುದುಕಿ ಗಂಜಿಯನ್ನು ತಂದಾಗ ಆಲಿವರ್ ತನ್ನ ಕುರ್ಚಿಯ ಎದುರು ಗೋಡೆಯ ಮೇಲೆ ತೂಗುಹಾಕಿದ್ದ ಒಂದು ಪಟವನ್ನೇ ಕುರಿತು ನೋಡುತ್ತಿದ್ದ.

ಮುದುಕಿ ಅವನ ನೆಟ್ಟ ದೃಷ್ಟಿಯನ್ನು ಕಂಡು, "ಏನು ಮಗು, ಆ ಚಿತ್ರವನ್ನು ಅಷ್ಟು ನೋಡುತ್ತೀಯೆ?" ಎಂದಳು.

ಆಲಿವರ್ "ಈ ಚಿತ್ರ ಯಾರನ್ನಾದರೂ ಕುರಿತು ಬರೆದದ್ದೆ? ಅಥವಾ ಕಲ್ಪನೆಯ ಚಿತ್ರವೊ?" ಎಂದ.

"ಇದು ಯಾರದೋ ನನಗೆ ಗೊತ್ತಿಲ್ಲವಪ್ಪ. ಏಕೆ, ಚಿತ್ರ ಚೆನ್ನಾಗಿದೆಯೇನು?"

"ತುಂಬ ಮುದ್ದಾಗಿದೆ" ಎಂದು ಆಲಿವರ್ ಆ ಚಿತ್ರವನ್ನು ಭಯ ಭಕ್ತಿಗಳಿಂದ ದೃಷ್ಟಿಸುತ್ತ ಹೇಳಿದ.

ಮುದುಕಿ ಅವನ ಭಯವನ್ನು ಗಮನಿಸಿ, "ಇದೇಕೆ ಹೀಗೆ ಹೆದರಿದ್ದೀಯೆ, ಮಗು?" ಎಂದು ಕೇಳಿದಳು.

"ಹೆದರಿಕೆಯಲ್ಲ, ಅಜ್ಜಿ. ಆ ಪಟದಲ್ಲಿ ಇರುವ ಆಕೆಯ ಕಣ್ಣು ನೋಡು. ಅದರಲ್ಲಿ ಎಷ್ಟು ದುಃಖ ತುಂಬಿಕೊಂಡಿದೆ! ಈ ಚಿತ್ರದಲ್ಲಿರುವಾಕೆಯ ಕಣ್ಣು ನನ್ನನ್ನೇ ಕುರಿತು ಹೇಗೆ ನೋಡುತ್ತಿದೆ, ನೋಡು. ಇನ್ನೇನು ತುಟಿ ತೆರೆದು, ನನ್ನೊಡನೆ ಮಾತನಾಡುವುದೋ ಎನ್ನುವ ಹಾಗಿದೆ, ನೋಡು."

ಅವನ ಮಾತುಗಳನ್ನು ಕೇಳಿ, ಮುದುಕಿ ಬೆಚ್ಚಿ, "ಛೆ ಛೆ, ಹಾಗೆಲ್ಲಾ ಮಾತನಾಡಬಾರದಪ್ಪ. ಸುಮ್ಮನೆ ಆಯಾಸ ಮಾಡಿಕೊಳ್ಳಬೇಡ. ಎಲ್ಲಿ? ಕುರ್ಚಿ ಹೀಗೆ, ಈಕಡೆ ತಿರುಗಿಸಿಕೊ. ಅದು! ಈಗ ಏನೂ ಕಾಣುವುದಿಲ್ಲ" ಎಂದು ಅವನ ಕುರ್ಚಿಯನ್ನು ಈಚೆ ಮುಖಮಾಡಿ ತಿರುಗಿಸಿದಳು.

ಕುರ್ಚಿ ಈಚೆಗೆ ತಿರುಗಿಸಿದುದರಿಂದ ಚಿತ್ರ ಕಣ್ಣಿಗೆ ಮರೆಯಾಯಿತಾದರೂ ಅದು ಅವನ ಮನಸ್ಸಿನಿಂದ ಮರೆಯಾಗಲಿಲ್ಲ. ಆದರೆ ಆ ವಿಷಯವನ್ನು ಹೇಳಿದರೆ ಆ ಮುದುಕಿ ವೃಥಾ ಪೇಚಾಡುವಳೆಂದು ಅವನು ಏನೂ ಹೇಳಲಿಲ್ಲ. ಅವನು ಏನೂ ಹೇಳದಿರಲು, ಅವನು ಆ ಚಿತ್ರದ

ವಿಷಯವನ್ನು ಮರೆತನೆಂದು ಆಮುದುಕಿ ಭಾವಿಸಿದಳು. "ತೆಕೊ, ಮಗು" ಎಂದು ಅವನಿಗೆ ಬಿಸಿಬಿಸಿ ಗಂಜಿ ಕೊಟ್ಟಳು.

ಆಲಿವರ್ ಆ ಗಂಜಿ ಕುಡಿಯುತ್ತಿದ್ದಾಗ ಬ್ರೌನ್ಲೊ ಒಳಕ್ಕೆ ಬಂದ. ತಾನು ಹಾಕಿಕೊಂಡಿದ್ದ ಕನ್ನಡಕವನ್ನು ಹಣೆಯ ಮೇಲಕ್ಕೆ ಸರಿಸಿ, ಆಲಿವರನನ್ನು ಚೆನ್ನಾಗಿ ದೃಷ್ಟಿಸಿ ನೋಡಿ, "ಏನು ಮಗು, ಹೇಗಿದ್ದೀಯೆ?" ಎಂದು ಪ್ರಶ್ನಿಸಿದನು.

"ಚೆನ್ನಾಗಿದ್ದೇನೆ, ಸ್ವಾಮಿ. ತಮ್ಮ ಆಶೀರ್ವಾದ, ತಮ್ಮ ದಯೆ" ಎಂದು ಆಲಿವರ್ ವಿನಯದಿಂದ ಉತ್ತರ ಕೊಟ್ಟ.

"ಬೇಗ ಹುಷಾರಾಗಬೇಕು, ಆಲಿವರ್. ಏನಾದರೂ ಆಹಾರ ತೆಗೆದುಕೊಳ್ಳುತ್ತಿದ್ದೀಯೊ?"

"ಈಗ ತಾನೆ ಗಂಜಿ ಕುಡಿದೆ."

"ಇನ್ನೂ ಗಂಜಿಯೆ!" ಎಂದು ಬ್ರೌನ್ಲೊ ತಲೆ ಕೊಡಹುವಾಗ ಅವನ ಎದುರಿಗೆ ಗೋಡೆಯ ಮೇಲಿದ್ದ ಚಿತ್ರಪಠ ಅವನ ಕಣ್ಣಿಗೆ ಬಿತ್ತು. ಒಡನೆಯೇ ಆಲಿವರನ ಮುಖ ನೋಡಿದ. ಅನಂತರ ಎರಡು ಮೂರು ಸಲ ಆಲಿವರನ ಮುಖವನ್ನೂ ಆ ಚಿತ್ರಪಟದ ಮುಖವನ್ನೂ ಹೋಲಿಸಿ ನೋಡಿದ. ಒಂದು ಇನ್ನೊಂದರ ಅಚ್ಚು ಇದ್ದ ಹಾಗಿತ್ತು. ಅದೇ ಮೂಗು, ಅದೇ ಬಾಯಿ, ಅದೇ ಕಣ್ಣು, ಅದೇ ಕಿವಿ, ಅದೇ ತಲೆಯ ಮಾಟ. ಚಿತ್ರದ ಮುಖದ ಪ್ರತಿಗೆರೆಯೂ ಆಲಿವರನ ಮುಖದಲ್ಲಿ ಇಳಿದು ಬಂದ ಹಾಗಿತ್ತು. ಬ್ರೌನ್ಲೊ ತನ್ನ ಆಶ್ಚರ್ಯವನ್ನು ತಡೆಯಲಾರದೆ, "ಆಹಾ, ಇದು ಯಾರು?" ಎಂದು ಬೆಚ್ಚಿದ.

ಅವನು ಬೆಚ್ಚಿಕೊಂಡ ಬಿರುಸಿಗೆ ಆಲಿವರ್ ತಾನೂ ಅತಿಯಾಗಿ ಬೆಚ್ಚಿ, ಇನ್ನೂ ನಿಶ್ಶಕ್ತಿಯಿದ್ದುದರಿಂದ ತಡೆಯಲಾರದೆ, ಮೂರ್ಛೆ ಹೋದ.

ಆಲಿವರನಿಗೆ ಉಪಚಾರ ಮಾಡಿ ಎಚ್ಚರಿಸಿದರು. ಅನಂತರ ಅವನ ಎದುರಿಗೆ ಯಾರು ಮಾತನಾಡಬೇಕಾದರೂ ತುಂಬ ಎಚ್ಚರಿಕೆ ಯಿಂದಿರುತ್ತಿದ್ದರು.

## ಆಲಿವರನ ಸತ್ವಪರೀಕ್ಷೆ

ಹೀಗೇ ಕೆಲವು ದಿನಗಳು ಕಳೆದ ಹಾಗೆಲ್ಲ ಆಲಿವರ್ ಕೊಂಚಕೊಂಚ ವಾಗಿ ಚೇತರಿಸಿಕೊಂಡ. ಯಾರ ಸಹಾಯವೂ ತಾನೇ ಇಲ್ಲದೆ ಎದ್ದು ನಿಂತು, ತನ್ನ ಬಟ್ಟೆಗಳನ್ನು ತಾನೇ ಹಾಕಿಕೊಳ್ಳುವಷ್ಟು ಅವನಿಗೆ ತ್ರಾಣ ಬಂತು. ಬ್ರೌನ್ಲೊ ಅವನಿಗೆ ಹೊಸ ಅಂಗಿ, ಷರಾಯಿ, ಟೋಪಿ, ಬೂಟ್ಸು ಗಳನ್ನು ಒದಗಿಸಿಕೊಟ್ಟ. ಆಲಿವರ್, ಅವನ ಅಪ್ಪಣೆ ಪಡೆದು, ತನ್ನ ಹಳೆಯ ಬಟ್ಟೆಗಳನ್ನು ತಾನು ಕಾಯಿಲೆ ಮಲಗಿದ್ದಾಗ ತನ್ನ ಸೇವೆ ಮಾಡಿದ ದಾಸಿಗೆ ಕೊಟ್ಟುಬಿಟ್ಟ. ಅವಳು ಅವನ್ನು ಹಳೆಯ ವಸ್ತ್ರದಂಗಡಿಗೆ ಮಾರಿ ಸ್ವಲ್ಪ ಹಣ ಪಡೆದಳು.

ಒಂದು ದಿನ ಆಲಿವರ್ ಆ ಮನೆಯಲ್ಲಿದ್ದ ಮುದುಕಿಯ ಜೊತೆಯಲ್ಲಿ ಮಾತನಾಡುತ್ತ ಕುಳಿತಿರುವಾಗ, ಒಬ್ಬ ಸೇವಕ ಬಂದು, "ಏನೂ ಬೇರೆ ಕೆಲಸವಿಲ್ಲದಿದ್ದರೆ, ನೀನು ಬಂದು ಬ್ರೌನ್ಲೊವನ್ನು ಕಾಣಬೇಕಂತೆ" ಎಂದು ಆಲಿವರನನ್ನು ಕರೆದ.

ಆಲಿವರ್ ಹೊರಡಲು ಎದ್ದೊಡನೆ ಆ ಮುದುಕಿ "ಒಂದು ನಿಮಿಷ ತಡೆ, ಮಗು. ಮುಖ ಕೈ ತೊಳೆದುಕೊ" ಎಂದು ನೀರು ಕೊಟ್ಟು, ಅವನ ತಲೆಯನ್ನು ಬಾಚಿ, ಚೊಕ್ಕಟಮಾಡಿ ಕಳುಹಿಸಿದಳು.

ಬ್ರೌನ್ಲೊ ಒಳಗೆ ತನ್ನ ಪುಸ್ತಕ ಭಂಡಾರದಲ್ಲಿ ಏನೋ ಕೆಲವು ಪುಸ್ತಕಗಳನ್ನು ನೋಡುತ್ತಿದ್ದ. ಆಲಿವರ್ ಅಲ್ಲಿಗೆ ಹೋದೊಡನೆಯೇ ಅವನು ಕುರ್ಚಿಯನ್ನು ಹಿಂಪಕ್ಕೆ ತಳ್ಳಿ, ಮೇಲೆದ್ದು, ಆಲಿವರನನ್ನು ಮೇಜಿನ ಹತ್ತಿರ ಕರೆದು, ಕುಳಿತುಕೊಳ್ಳುವಂತೆ ಹೇಳಿದ.

ಅನಂತರ "ಕೇಳು, ಆಲಿವರ್, ಗಮನವಿಟ್ಟು ಕೇಳು. ನನಗೂ ನಿನಗೂ ಏನೂ ಮುಚ್ಚುಮರೆ ಬೇಡ. ನಾನು ಹೇಳುವುದನ್ನು ನೀನು ಅರ್ಥಮಾಡಿಕೊಳ್ಳಬಲ್ಲೆಯೆಂಬ ಭರವಸೆ ನನಗಿದೆ" ಎಂದು ಮೃದುವಾಗಿ ಹೇಳತೊಡಗಿದ.

ತನ್ನನ್ನು ಎಲ್ಲಿ ಮನೆಯಿಂದ ಓಡಿಸಿಬಿಡುವರೋ, ಎಲ್ಲಿ ತಾನು ಪುನಃ ಬೀದಿಬೀದಿ ಅಲೆಯಬೇಕಾದೀತೋ ಎಂದು ಆಲಿವರ್ ಹೆದರಿ, "ನನ್ನನ್ನು ಬೀದಿಗೆ ಅಟ್ಟಿಬಿಡಬೇಡಿ. ನನ್ನನ್ನು ಇಲ್ಲಿಯೇ ಇರಿಸಿಕೊಳ್ಳಿ. ಇಲ್ಲಿಯೇ ಜವಾನನಾಗಿ ಬೇಕಾದರೆ ಕೆಲಸ ಮಾಡುತ್ತೇನೆ. ತಬ್ಬಲಿಯನ್ನು ತಳ್ಳಿಬಿಡಬೇಡಿ" ಎಂದು ಗೋಗರೆದು ಬೇಡಿಕೊಂಡನು.

ಬ್ರೌನ್ಲೋ ಅವನ ಬೇಡಿಕೆಗೆ ಕರಗಿ, "ಹೆದರಬೇಡ, ಮಗು. ನೀನು ಸರಿಯಾಗಿ ನಡೆದುಕೊಳ್ಳುವವರೆಗೂ ನಿನ್ನನ್ನು ಹೊರದೂಡುವ ಆಲೋಚನೆ ನನಗೂ ಇಲ್ಲ" ಎಂದನು.

"ನೀವು ಹೇಳಿದ ಹಾಗೆ ಕೇಳಿಕೊಂಡಿರುತ್ತೇನೆ" ಎಂದು ಆಲಿವರ್ ಕೈಮುಗಿದು ಪ್ರಾರ್ಥಿಸಿದ.

"ಒಳ್ಳೆಯದು, ಆಲಿವರ್. ಆದರೆ ಒಂದು ಮಾತು: ಗಮನವಿಟ್ಟು ಕೇಳು. ಇದಕ್ಕೆ ಮೊದಲು ಕೆಲವು ಸಲ ನಾನು ಕೆಲವರಿಗೆ ಉಪಕಾರ ಮಾಡಬೇಕೆಂದು ಯತ್ನಿಸಿದರೆ, ಅವರು ನನ್ನ ನಂಬಿಕೆಗೆ ದ್ರೋಹ ಮಾಡಿದ್ದಾರೆ. ಆದರೆ ನಿನ್ನನ್ನು ನೋಡಿದರೆ ನೀನು ಹಾಗೆ ಮೋಸ ಮಾಡುವುದಿಲ್ಲ ಎನ್ನಿಸುತ್ತದೆ. ನೀನು ತಬ್ಬಲಿಯೆಂದು ಹೇಳುತ್ತೀ. ನಾನೂ ಹತ್ತು ಕಡೆ ವಿಚಾರಿಸಿ, ನೀನು ನಿಜವಾಗಿಯೂ ಅನಾಥನೆಂದು ಕೇಳಿ ತಿಳಿದಿದ್ದೇನೆ. ನೋಡು, ಆಲಿವರ್. ನೀನು ಎಲ್ಲಿಂದ ಬಂದೆ, ನಿನ್ನನ್ನು ಯಾರು ಬೆಳೆಸಿದರು, ನೀನು ಈ ಕಳ್ಳರ ಜೊತೆಗೆ ಹೇಗೆ ಬಿದ್ದೆ—ಇದನ್ನೆಲ್ಲಾ ಮುಚ್ಚುಮರೆಯಿಲ್ಲದೆ ಇದ್ದುದು ಇದ್ದಹಾಗೆ ಹೇಳು. ನಿನ್ನ ಕ್ಷೇಮ ಚಿಂತನೆಯ ಭಾರ ನನಗಿರಲಿ" ಎಂದು ಅಭಯ ಹೇಳಿದ, ಬ್ರೌನ್ಲೋ.

ಆಲಿವರ್ ತನಗೆ ಇಷ್ಟಾನರೂ ಆಸರೆ ಸಿಕ್ಕಿತಲ್ಲಾ ಎಂಬ ಸಂತೋಷ ದಿಂದ ಬಿಕ್ಕಿಬಿಕ್ಕಿ ಅಳುತ್ತಾ ತನ್ನ ವೃತ್ತಾಂತವನ್ನು ಅವನಿಗೆ ತಿಳಿಸ ಬೇಕೆಂದು ತೊಡಗುವಷ್ಟರಲ್ಲಿ ಮನೆಯ ದಾಸಿ ಬಂದು, "ಗ್ರಿಮ್‌ವಿಗ್ ಮಹಾಶಯರು ನಿಮ್ಮನ್ನು ಕಾಣಬಯಸುತ್ತಾರೆ" ಎಂದಳು.

"ಮೇಲಕ್ಕೆ ಹತ್ತಿ ಬರುತ್ತಿದ್ದಾನೆ ತಾನೆ?"

"ಬರುತ್ತಿದ್ದಾರೆ, ಸ್ವಾಮಿ. ಮನೆಯಲ್ಲಿ ಏನಾದರೂ ತಿಂಡಿ ಇದೆಯೆ, ಎಂದರು. ಇದೆ, ಎಂದೆ. ಹಾಗಾದರೆ ಟೀ ಕುಡಿಯುವುದಕ್ಕೆ ಬರುತ್ತೇನೆ, ಎಂದರು" ಎಂದು ಆ ದಾಸಿ ಹೇಳಿದಳು.

ಅವಳ ಮಾತು ಕೇಳಿ ಬ್ರೌನ್ಲೋಗೆ ನಗು ಬಂತು. "ಆಲಿವರ್, ಈಗ ಬರುವವನು ನನ್ನ ಹಳೆಯ ಸ್ನೇಹಿತ, ಗ್ರಿಮ್‌ವಿಗ್ ಎಂದು ಅವನ ಹೆಸರು. ಮಾತು ಸ್ವಲ್ಪ ಒರಟು, ಆದರೆ ಮನಸ್ಸು ಚಿನ್ನ" ಎಂದ.

ಬ್ರೌನ್ಲೊ ಹೀಗೆ ಹೇಳುತ್ತಿರುವಾಗಲೇ ಗ್ರಿಮ್‌ವಿಗ್ ಕೋಣೆಯೊಳಕ್ಕೆ ಬಂದ. ಶರೀರ ಸ್ವಲ್ಪ ಸ್ಥೂಲ. ಒಂದು ಕಾಲು ಕುಂಟು, ದಪ್ಪ ದೊಣ್ಣೆ ಯೂರಿಕೊಂಡು ಬಂದ. ಅವನು ಯಾರನ್ನಾದರೂ ಮಾತನಾಡಿಸುವಾಗ ತಲೆಯನ್ನು ಕೊಂಕಿಸಿ, ಕಡೆಗಣ್ಣಿನಿಂದ ನೋಡುವುದನ್ನು ಕಂಡರೆ ಗಿಳಿಯ ಜ್ಞಾಪಕವಾಗುತ್ತಿತ್ತು.

ಅವನು ತಾನು ಕೈಯಲ್ಲಿ ಹಿಡಿದಿದ್ದ ಒಂದು ಕಿತ್ತಿಳಿಹಣ್ಣಿನ ಸಿಪ್ಪೆಯ ಚೂರನ್ನು ತಂದು, ಬ್ರೌನ್ಲೋವಿನ ಮೂತಿಯ ಮುಂದೆ ಹಿಡಿದು "ಇದೇನು, ನೋಡಿದೆಯ? ಸ್ನೇಹಿತನನ್ನು ನೋಡಿಕೊಂಡು ಹೋಗೋಣವೆಂದು ಬಂದರೆ, ಈ ಹಾಳು ಚೂರನ್ನು ನೋಡಬೇಕೆ. ಹಿಂದೆ ಇಂಥದೇ ಒಂದು ಚೂರಿನ ಮೇಲೆ ಕಾಲಿಟ್ಟು ಜಾರಿ ಹೀಗೆ ಕುಂಟಾಯಿತು. ಎಂದಾದರೂ ಇಂಥದೇ ಸಿಪ್ಪೆಯ ಮೇಲೆ ಕಾಲಿಟ್ಟು ಜಾರಿ ನನ್ನ ಜೀವವೇ ಹೋಗುತ್ತದೆ. ನನಗೆ ಗೊತ್ತು. ಈ ನನ್ನ ಮಾತು ಸುಳ್ಳಾದರೆ, ನನ್ನನ್ನು ಕೊಂದು

ತಿಂಪಾಣೆ" ಎಂದು ತನ್ನ ದೊಣ್ಣೆಯಿಂದ ನೆಲವನ್ನು ಕುಟ್ಟುತ್ತಾ ಕೂಗಾಡಿದ.

ಹಾಗೆ ಕೂಗಾಡುವಾಗ ಆಲಿವರ್ ಅವನ ಕಣ್ಣಿಗೆ ಗೋಚರವಾದ. "ಇದು ಯಾರಿದು?" ಎಂದು ಗ್ರಿಮ್‌ವಿಗ್ ಕೇಳಿದ.

"ಅದೇ, ನಿನಗೆ ಹೇಳುತ್ತಿರಲಿಲ್ಲವೆ? ಇವನೇ ನಮ್ಮ ಆಲಿವರ್" ಎಂದ, ಬ್ರೌನ್ಲೋ.

ಆಲಿವರ್ ಗ್ರಿಮ್‌ವಿಗ್ಗಿಗೆ ನಮಸ್ಕಾರ ಮಾಡಿದ.

"ಯಾರು? ಇವನೇ? ಜ್ವರ ಬಂದ ಹುಡುಗ?" ಎಂದು ಗ್ರಿಮ್‌ವಿಗ್ ಜ್ವರ ತನಗೇನಾದರೂ ಅಂಟೀತೆಂದು ಭಯದಿಂದ ಹಿಮ್ಮೆಟ್ಟಿದ. ಆದರೆ ಒಡನೆಯೇ ಏನೋ ತೋಚಿ, ತನ್ನ ಕೈಯಲ್ಲಿದ್ದ ಹಣ್ಣಿನ ಸಿಪ್ಪೆಯನ್ನು ಮುಂದೆ ಚಾಚಿ, "ಆಹಾ, ಈಗ ಗೊತ್ತಾಯಿತು! ಈ ಸಿಪ್ಪೆಯ ಒಳಗಿದ್ದ ಹಣ್ಣನ್ನು ತಿಂದು, ಸಿಪ್ಪೆಯನ್ನು ಬಿಸುಟವನು ಇವನೇ! ಈ ಮಾತು ಸುಳ್ಳಾದರೆ, ನನ್ನನ್ನು ಕೊಂದು ತಿಂದಾಣೆ!" ಎಂದನು.

ಬ್ರೌನ್ಲೋ "ಛೆ ಛೆ! ಅವನಿಗೆ ಕಿತ್ತಿಳೆಹಣ್ಣು ಇನ್ನೂ ಕೊಟ್ಟೇ ಇಲ್ಲ. ಯಾರು ತಿಂದು ಎಸೆದದ್ದೋ ವಿಚಾರಿಸೋಣ ಬಾ. ಪಾಪ, ಈಗತಾನೆ ಜ್ವರದಿಂದ ಚೇತರಿಸಿಕೊಳ್ಳುತ್ತಿದ್ದಾನೆ. ಬಾ, ಇವನನ್ನು ಮಾತಾಡಿಸು" ಎಂದು ಗ್ರಿಮ್‌ವಿಗ್ಗನ್ನು ಸಂತೈಸಿದ.

ಗ್ರಿಮ್‌ವಿಗ್ ತನ್ನ ದೊಣ್ಣೆಯನ್ನು ಹಿಡಿದುಕೊಂಡೇ ಒಂದು ಕುರ್ಚಿಯ ಮೇಲೆ ಕುಳಿತುಕೊಂಡ. ಜೇಬಿನಿಂದ ಕನ್ನಡಕವನ್ನು ತೆಗೆದು, ಒರಸಿ, ಮೂಗಿನ ಮೇಲಿಟ್ಟುಕೊಂಡು ಆಲಿವರನ್ನು ಕುರಿತು ನೋಡಿದ.

"ಇವನೇಯೋ ಹುಡುಗ?" ಎಂದ.

"ಹೌದು, ಇವನೆ" ಎಂದ, ಬ್ರೌನ್ಲೋ.

"ಹೇಗಿದ್ದೀಯೋ, ಹುಡುಗ?" ಎಂದು ಗ್ರಿಮ್‌ವಿಗ್ ಕೇಳಿದ.

ಆಲಿವರ್ ಅವನ ದೃಷ್ಟಿಯನ್ನು ತಾಳಲಾರದೆ ಬೆದರಿ ವರ್ಣಹೀನ ನಾಗಿ "ತಮ್ಮ ದಯೆಯಿಂದ ಚೆನ್ನಾಗಿದ್ದೇನೆ" ಎಂದ.

ಅಷ್ಟರಲ್ಲಿ ಬ್ರ್ಯಾನ್ಲೊ "ಆಲಿವರ್, ಕೆಳಗೆ ಹೋಗಿ, ಟೀ ತರಬಹುದು ಎಂದು ಹೇಳು" ಎಂದ. ಆಲಿವರ್ ಅಷ್ಟು ನೆಪ ಸಿಕ್ಕಿದ್ದೇ ಸಾಕು ಎಂದು ಸಂತೋಷದಿಂದ ಕೆಳಗೆ ಇಳಿದುಹೋದ.

ಆಲಿವರ್ ಮರೆಯಾದ ಮೇಲೆ ಬ್ರ್ಯಾನ್ಲೊ "ಹುಡುಗ ಸುಟಿಯಾಗಿ ದ್ದಾನೆ, ಅಲ್ಲವೆ?" ಎಂದು ಗ್ರಿಮ್‌ವಿಗ್ಗನ್ನು ಕೇಳಿದ.

"ನನಗೇನು ಗೊತ್ತು?" ಎಂದು ಗ್ರಿಮ್‌ವಿಗ್ ಸಿಡುಕಿದ.

"ನನಗೇನು ಗೊತ್ತು ಎಂದರೆ ಏನರ್ಥ?"

"ಏನರ್ಥವೋ ನನಗೇನು ಗೊತ್ತು. ಎಲ್ಲಾ ಹುಡುಗರ ಯೋಗ್ಯ ತೆಯೂ ಒಂದೇ."

ಅಷ್ಟು ವೇಳೆಗೆ ಟೀ ಬಂತು. ಟೀ ಜೊತೆಗೆ ತಿಂಡಿತಿನಿಸೂ ಬಂತು. ತಿನಿಸು ಚೆನ್ನಾಗಿತ್ತು, ಟೀ ಚೆನ್ನಾಗಿತ್ತು. ಗ್ರಿಮ್‌ವಿಗ್ಗನ ಸಿಡುಕು ಸ್ವಲ್ಪ ಶಾಂತವಾಯಿತು. ಅವರ ಜೊತೆಯಲ್ಲೇ ಟೀ ಕುಡಿಯಲು ಕುಳಿತು ಕೊಂಡಿದ್ದ ಆಲಿವರನಿಗೆ ಅವನ ಸಿಡುಕು ಕಡಿಮೆಯಾದುದನ್ನು ಕಂಡು ಕೊಂಚ ಧೈರ್ಯ ಬಂತು.

ಟೀ ಕುಡಿದ ಮೇಲೆ, ಗ್ರಿಮ್‌ವಿಗ್ ಆಲಿವರನ ಕಡೆಗೆ ಒಂದು ಕ್ರೂರ ದೃಷ್ಟಿ ಬೀರಿ, ಬ್ರ್ಯಾನ್ಲೊವನ್ನು ಕುರಿತು "ಆಲಿವರನ ಸಾಹಸಕೃತ್ಯಗಳ ಸಂಪೂರ್ಣ ಸತ್ಯಕಥೆಯನ್ನು ಯಾವಾಗ ಕೇಳಬೇಕೆಂದಿದ್ದೀಯೆ?" ಎಂದು ಕೆಣಕಿದ.

"ನಾಳೆ ಬೆಳಗ್ಗೆ. ಬೇರೆ ಯಾರೂ ಇಲ್ಲದೆ ನಾನೂ ಅವನೂ ಇಬ್ಬರೇ ಇರುವಾಗ. ಮಗು, ಆಲಿವರ್! ನಾಳೆ ಬೆಳಗ್ಗೆ ಹತ್ತು ಗಂಟೆಯ ವೇಳೆಗೆ ಬಂದು ನನ್ನನ್ನು ಕಾಣು. ಮರೆಯಬೇಡ" ಎಂದ ಬ್ರ್ಯಾನ್ಲೊ.

"ನೀನೆಲ್ಲಿ ಬರುತ್ತೀಯೆ, ಕಳ್ಳ!" ಎನ್ನುವ ಹಾಗೆ ಗ್ರಿಮ್‌ವಿಗ್

ಆಲಿವರನ್ನು ದುರುಗುಟ್ಟಿ ನೋಡಿದ. ಆಲಿವರ್ ಅವನ ದೃಷ್ಟಿಯಿಂದ ಭ್ರಾಂತನಾಗಿ, "ನಾಳೆ ಖಂಡಿತ ಬರುತ್ತೇನೆ" ಎಂದು ತೊದಲುತ್ತ ಹೇಳಿದ.

"ಅವನೆಲ್ಲಿ ನಾಳೆ ಬರುತ್ತಾನೆ? ಶುದ್ಧ ಸುಳ್ಳು. ಅವನು ಹೆದರುತ್ತ ತೊದಲುತ್ತ ಮಾತನಾಡಿದ್ದು ನೋಡಲಿಲ್ಲವೆ? ನಿಜ ಹೇಳುವವನಿಗೆ ಹೆದರಿಕೆ ಏಕೆ?" ಎಂದು ಗ್ರಿಮ್‌ವಿಗ್ ತನ್ನ ದೊಣ್ಣೆಯಿಂದ ಮೇಜು ಕುಟ್ಟಿದ. ಆಲಿವರನ್ನು ತಿಂದುಬಿಡುವಂತೆ ನೋಡುತ್ತ "ಹುಷಾರ್, ಬ್ರೌನ್ಲೊ. ಈ ಹುಡುಗ ನಿನಗೆ ಖಂಡಿತ ಮೋಸ ಮಾಡುತ್ತಾನೆ" ಎಂದ.

"ಅವನು ಮೋಸ ಮಾಡಿದರೆ ನನ್ನ ಕಣ್ಣಾಣೆ" ಎಂದು ಬ್ರೌನ್ಲೊ ಸ್ವಲ್ಪ ಆಗ್ರಹದಿಂದ ಹೇಳಿದ.

"ಅವನು ಮೋಸ ಮಾಡದಿದ್ದರೆ ನನ್ನನ್ನು ಕೊಂದು ತಿಂದಾಣೆ" ಎಂದು ಗ್ರಿಮ್‌ವಿಗ್ ಇನ್ನೂ ಆಗ್ರಹದಿಂದ ಕೂಗಿದ.

"ನೋಡೋಣ. ನಾಳೆಯಾಗಲಿ, ನೋಡೋಣ" ಎಂದು ಬ್ರೌನ್ಲೊ ತನ್ನ ಸಿಟ್ಟನ್ನು ಅಡಗಿಸಿಕೊಂಡು ಹೇಳಿದ.

"ನೋಡೋಣ. ನೋಡೋಣ" ಎಂದು ಗ್ರಿಮ್‌ವಿಗ್ ಅವನನ್ನು ಕೆಣಕುವಂತೆ ಮಾತನಾಡಿದ.

ಮುಂದೆ ಅವರ ಮಾತು ಹೇಗೆ ಬೆಳೆಯುತ್ತಿತ್ತೋ. ಆ ವೇಳೆಗೆ ಆ ಮನೆಕೆಲಸದ ಅಜ್ಜಿ ಮೇಲೆ ಬಂದು, "ಈ ದಿನ ಬೆಳಗ್ಗೆ ನೀವು ಯಾವುದೋ ಪುಸ್ತಕ ಕೊಂಡುಕೊಂಡಿರಂತಲ್ಲ. ಆ ಅಂಗಡಿಯ ಹುಡುಗ ಈ ಪುಸ್ತಕದ ಕಟ್ಟು ತಂದುಕೊಟ್ಟ" ಎಂದು ಒಂದು ಪುಸ್ತಕದ ಕಟ್ಟನ್ನು ಬ್ರೌನ್ಲೊ ಕೈಗೆ ಕೊಟ್ಟಳು.

ಬ್ರೌನ್ಲೊ "ಆ ಹುಡುಗನನ್ನು ಸ್ವಲ್ಪ ನಿಲ್ಲಹೇಳು. ಅವನ ಅಂಗಡಿಗೆ ಒಂದು ಮಾತು ಹೇಳಿಕಳುಹಿಸಬೇಕಾಗಿತ್ತು" ಎಂದ.

"ಅಯ್ಯೋ, ಆ ಹುಡುಗ ಆಗಲೇ ಹೊರಟುಹೋದನಲ್ಲ" ಎಂದಳು ಮುದುಕಿ.

"ಹೊರಟುಹೋದನೆ! ಛೆ, ಇನ್ನು ನಾಳೆಯುವರೆಗೆ ಕಾದಿರಬೇಕು" ಎಂದು ಬ್ರೌನ್ಲೊ ಅಸಮಾಧಾನಪಟ್ಟುಕೊಂಡುದನ್ನು ನೋಡಿ, ಗ್ರಿಮ್‌ವಿಗ್ "ಅದಕ್ಕೆ ಏಕೆ ಇಷ್ಟು ಚಿಂತೆ? ನಿನ್ನ ನಂಬಿಕೆಯ ಹುಡುಗ ಆಲಿವರ್ ಇದ್ದಾನಲ್ಲ. ಅವನನ್ನು ಏಕೆ ಕಳುಹಿಸಬಾರದು?" ಎಂದು ಕೆಣಕುವಂತೆ ಮಾತನಾಡಿದ.

"ಏನು ಕೆಲಸ ಎಂಬುದನ್ನು ಹೇಳಿದರೆ ನಾನೇ ಮಾಡಿಕೊಂಡು ಬರುತ್ತೇನೆ. ಬೇಗ ಮಾಡಿಕೊಂಡು ಬರುತ್ತೇನೆ" ಎಂದು ಆಲಿವರ್ ಎದ್ದ.

ಗ್ರಿಮ್‌ವಿಗ್ಗನ ಕೆಣಕು ಮಾತನ್ನೂ ಆಲಿವರನ ಆತುರವನ್ನೂ ನೋಡಿ, ಬ್ರೌನ್ಲೊ "ನೀನೇ ಹೋಗುವೆಯಂತೆ, ಮಗು. ಹೆಚ್ಚೇನೂ ಕೆಲಸವಿಲ್ಲ. ನೆನ್ನೆ ತಂದ ಕೆಲವು ಪುಸ್ತಕಗಳನ್ನು ಆ ಅಂಗಡಿಗೆ ಹಿಂದಿರುಗಿಸಿ ಕೊಡಬೇಕಾಗಿತ್ತು. ಪುಸ್ತಕಗಳು ಅಲ್ಲಿ ಆ ಮೇಜಿನ ಮೇಲಿವೆ. ತೆಗೆದು ಕೊಂಡು ಬಾ" ಎಂದ.

ಆಲಿವರ್, ತನ್ನ ಕೃತಜ್ಞತೆಯನ್ನು ತೋರಿಸುವ ಅವಕಾಶ ವುಂಟಾಯಿತಲ್ಲಾ ಎಂದು ಸಂಭ್ರಮದಿಂದ ಹೋಗಿ ಪುಸ್ತಕಗಳನ್ನು ತಂದುಕೊಟ್ಟ.

ಬ್ರೌನ್ಲೊ ಆ ಪುಸ್ತಕಗಳನ್ನು ಪರಿಶೀಲಿಸಿ ಆಲಿವರನ ಕೈಯಲ್ಲಿಟ್ಟು, ಗ್ರಿಮ್‌ವಿಗ್ಗನ ಮುಖವನ್ನೇ ನೋಡುತ್ತ ಜೇಬಿನಿಂದ ಒಂದು ಐದು ಪೌಂಡಿನ ನೋಟನ್ನು ತೆಗೆದು, ಅದನ್ನೂ ಆಲಿವರನ ಕೈಯಲ್ಲಿಟ್ಟು, "ನೋಡು, ಮಗು. ಈ ಪುಸ್ತಕಗಳನ್ನು ತೆಗೆದುಕೊಂಡು ಹೋಗಿ ಆ ಅಂಗಡಿಗೆ ಕೊಡಬೇಕು. ಅಂಗಡಿಯವನಿಗೆ ನಾನು ನಾಲ್ಕೂವರೆ ಪೌಂಡು ಕೊಡಬೇಕಾಗಿದೆ. ಈ ಐದು ಪೌಂಡು ಅವನಿಗೆ ಕೊಟ್ಟು, ಉಳಿದ ಹತ್ತು ಷಿಲ್ಲಿಂಗ್ ಹಿಂದಕ್ಕೆ ತಾ" ಎಂದ.

ಆಲಿವರ್ ಪುಸ್ತಕಗಳನ್ನು ಕಂಕುಳಲ್ಲಿ ಸಿಕ್ಕಿಸಿಕೊಂಡು, ಐದು ಪೌಂಡು ನೋಟನ್ನು ಒಳಜೇಬಲ್ಲಿ ಭದ್ರವಾಗಿ ಇರಿಸಿಕೊಂಡು, "ಇದೋ, ಈಗ ಹತ್ತೇ ನಿಮಿಷಗಳಲ್ಲಿ ಓಡಿಬಂದೆ" ಎಂದು ಹೇಳಿ ಹೊರಟ. ಮುದುಕಿ ಅವನ ಜೊತೆಯಲ್ಲಿಯೇ ಬಾಗಿಲವರೆಗೂ ಹೋಗಿ, "ಹೀಗೆಹೀಗೆ ಹೋಗ ಬೇಕು, ಇಂಥಿಂಥ ಕಡೆ ತಿರುಗಬೇಕು" ಎಂದು ಆ ಪುಸ್ತಕದಂಗಡಿಗೆ ಹೋಗಲು ಅತಿ ಹತ್ತಿರವಾದ ದಾರಿ ಯಾವುದೆಂಬುದನ್ನು ತಿಳಿಸಿ ಕಳುಹಿಸಿದಳು.

ಆಲಿವರ್ ಕಣ್ಮರೆಯಾಗುವವರೆಗೂ ಆ ಮುದುಕಿ ಅವನನ್ನೇ ಅಕ್ಕರೆ ಯಿಂದ ನೋಡುತ್ತ ನಿಂತಿದ್ದಳು. ಆಲಿವರ್ ಕೂಡ ಆ ರಸ್ತೆಯ ಮೂಲೆ ಯನ್ನು ಬಳಸುವಾಗ ಹಿಂದಿರುಗಿ ನೋಡಿ ಮುದುಕಿಯ ಕಡೆಗೆ ಕೈಬೀಸಿ ಕರೆದು, ಕಣ್ಮರೆಯಾದ. ಮುದುಕಿ ಅವನು ಮುಂದೆ ಎಷ್ಟುಹೊತ್ತಿಗೆ ಬಂದಾನೋ ಎಂದು ಆತಂಕಪಡುತ್ತಾ ಮನೆಯೊಳಕ್ಕೆ ಬಂದಳು.

ಸ್ವಲ್ಪ ಹೊತ್ತಾಯಿತು. ಬ್ರೌನ್ಲೊ ತನ್ನ ಗಡಿಯಾರವನ್ನು ತೆಗೆದು, ಮೇಜಿನ ಮೇಲಿಟ್ಟು, "ಆಲಿವರ್ ಹೋಗಿ ಎರಡು ನಿಮಿಷವಾಯಿತು. ಅವನು ಎಷ್ಟೇ ನಿದಾನವಾಗಿ ಹೋದರೂ ಇನ್ನು ಇಪ್ಪತ್ತು ನಿಮಿಷಗಳಲ್ಲಿ ಬಂದೇ ಬರಬೇಕು. ನೋಡೋಣ" ಎಂದನು.

ಗ್ರಿಮ್‌ವಿಗ್ ಮುಖ ಸಿಂಡರಿಸಿಕೊಂಡು, "ಓ, ಅವನು ಬರುತ್ತಾ ನೆಂದು ಇನ್ನೂ ನಂಬಿದ್ದೀಯ?" ಎಂದ.

ಬ್ರೌನ್ಲೊ ನಸುನಗುತ್ತಾ "ಏಕೆ, ನಿನಗೆ ನಂಬಿಕೆಯಿಲ್ಲವೆ?" ಎಂದ.

ಯಾರು ಏನು ಹೇಳಿದರೂ ಅದಕ್ಕೆ ಪ್ರತಿ ಹೇಳುವುದು ಗ್ರಿಮ್ ವಿಗ್ಗಿನ ಹುಟ್ಟುಗುಣ. ಆದ್ದರಿಂದಲೇ ಬ್ರೌನ್ಲೊವಿನ ನಸುನಗುವನ್ನು ಕಂಡು ಅವನಿಗೆ ಕೆರಳಿತು. ಕೆರಳಿದೊಡನೆ ಮುಷ್ಟಿಯಿಂದ ಮೇಜನ್ನು ಗುದ್ದುತ್ತ, "ನೀನು ಏನೇ ಹೇಳಿದರೂ ನನಗೆ ನಂಬಿಕೆ ಸ್ವಲ್ಪವೂ ಇಲ್ಲ.

ಬೀದಿಯ ಭಿಕಾರಿಯನ್ನು ತಂದು ಮೈತುಂಬ ಹೊಸ ಬಟ್ಟೆ ಕೊಟ್ಟಿದ್ದೀಯೆ. ಅವನ ಕಂಕುಳಲ್ಲಿ ಅತ್ಯಮೂಲ್ಯವಾದ ನಾಲ್ಕಾರು ಪುಸ್ತಕಗಳಿವೆ. ಸಾಲದು ದಕ್ಕೆ ಅವನ ಅಂಗಿಯ ಒಳಜೇಬಿನಲ್ಲಿ ಐದು ಪೌಂಡಿನ ನೋಟು ಸಿಕ್ಕಿ ಕೊಂಡಿದೆ. ಇಂಥ ಅಪೂರ್ವವಾದ ಸಂಪತ್ತು ದೊರಕಿರುವಾಗ, ಅವನು ಏಕೆ ಇಲ್ಲಿಗೆ ತಿರುಗಿ ಬಂದಾನು? ನಿನಗೆ ಮೋಸ ಮಾಡಿ, ಪುನಃ ತನ್ನ ಕಳ್ಳ ಕೊಂಪೆಗೇ ಸೇರುತ್ತಾನೆ. ನಾನು ಹೇಳಿದ ಮಾತು ಸುಳ್ಳಾದರೆ, ಬ್ರೌನ್ಲೊ, ನನ್ನನ್ನು ಕೊಂದು ತಿಂದಾಣೆ" ಎಂದ.

ಬ್ರೌನ್ಲೊ ಏನೂ ಮಾತನಾಡಲಿಲ್ಲ. ಅವನ ಮುಖದಲ್ಲೂ ಕೊಂಚ ಕೊಂಚವಾಗಿ ಚಿಂತೆ ಸುಳಿಯತೊಡಗಿತು. ಇಪ್ಪತ್ತು ನಿಮಿಷವಾಯಿತು, ಅರ್ಧಗಂಟೆಯಾಯಿತು, ಒಂದೆರಡು ಗಂಟೆಗಳೂ ಆದವು. ಬರುಬರುತ್ತ ಕತ್ತಲಾಯಿತು, ಸಂಜೆಯಾಯಿತು, ರಾತ್ರಿಯಾಯಿತು. ಸ್ನೇಹಿತರಿಬ್ಬರೂ ಮೌನವಾಗಿ ಏನೂ ಮಾತನಾಡದೆ ನಡುವೆಯಿದ್ದ ಗಡಿಯಾರವನ್ನೇ ನೋಡುತ್ತ ಕುಳಿತಿದ್ದರು.

## ಆಲಿವರ್ ಏನಾದ?

ಈ ನಡುವೆ, ಆ ದಿನ ಆಲಿವರನನ್ನು ಬೀದಿಯ ಜನಗಳ ಬೇಟೆಗೆ ಒಪ್ಪಿಸಿ, ತಾವು ಮಾತ್ರ ತಲೆತಪ್ಪಿಸಿಕೊಂಡು ಓಡಿಹೋದ ಕಳ್ಳಕೊರಮನೂ ಚಾರ್ಲಿಯೂ ಫ್ಯಾಗಿನ್ನಿಗೆ ಬಂದು ಆಲಿವರನು ಸಿಕ್ಕಿಬಿದ್ದುದನ್ನು ವರದಿ ಒಪ್ಪಿಸಿದರು.

ಫ್ಯಾಗಿನ್ ಅವರ ಮೇಲೆ ರೇಗಿದ, ಕೂಗಾಡಿದ. ಅವರನ್ನು ಬೈದ. ಏನು ಮಾಡಿದರೇನು? ಆಲಿವರ್ ಯಾರಿಗೆ ಏನು ಹೇಳಿಬಿಡುತ್ತಾನೋ ಎಂದು ಭಯದಿಂದ ಕರಗಿ ನೀರಾಗಿ ಹೋದ.

"ಹೇಗಾದರೂ ಮಾಡಿ, ಏನಾದರೂ ಮಾಡಿ, ಆ ಹುಡುಗನನ್ನು ಹಿಡಿದುಕೊಂಡು ಬರಬೇಕು. ಅವನಿಗೆ ನಮ್ಮ ರಹಸ್ಯವೆಲ್ಲ ತಿಳಿದು

ಹೋಗಿದೆ. ಅವನು ಯಾರಿಗಾದರೂ ಏನಾದರೂ ಬಾಯಿಬಿಟ್ಟರೆ ನಮಗೆ ತುಂಬ ಅಪಾಯ" ಎಂದು ಫ್ಯಾಗಿನ್ ಗೋಳಾಡಿದ.

ಅಂದಿನಿಂದ ಕೊರಮನೂ ಚಾರ್ಲಿಯೂ ಆಲಿವರನ ಗತಿ ಏನಾಯಿತೆಂದು ಶೋಧಿಸಲು ತೊಡಗಿದರು. ತುಂಬ ಎಚ್ಚರಿಕೆಯಿಂದ ಅವರನ್ನೂ ಇವರನ್ನೂ ವಿಚಾರಿಸಿ, ಆಲಿವರ್ ಬ್ರೌನ್ಲೊ ಮನೆಯಲ್ಲಿ ಆರೈಕೆ ಪಡೆಯುತ್ತಿದ್ದುದನ್ನು ಪತ್ತೆಮಾಡಿದರು. ಆ ಸುದ್ದಿಯನ್ನು ತಂದು ಫ್ಯಾಗಿನ್ನಿಗೆ ತಿಳಿಸಿದರು.

ಫ್ಯಾಗಿನ್ ತನ್ನ ಕಳ್ಳರ ಕೂಟಕ್ಕೆ ಸೇರಿದ ನ್ಯಾನ್ಸಿ ಎಂಬ ಹೆಣ್ಣನ್ನು ಕರೆದು, ಅವಳಿಗೆ ಆಲಿವರನ ವೃತ್ತಾಂತವನ್ನು ತಿಳಿಸಿ, "ನೋಡು, ನ್ಯಾನ್ಸಿ, ಅವನನ್ನು ಪುನಃ ಇಲ್ಲಿಗೆ ಎಳೆದುಕೊಂಡು ಬರಬೇಕು. ಆ ಕೆಲಸಕ್ಕೆ ಅಷ್ಟು ಪರಿಚಯವಿಲ್ಲದವರೇ ಆಗಬೇಕು. ಆದ್ದರಿಂದ ನೀನು ಹೋಗಿ, ಆ ಬ್ರೌನ್ಲೊ ಮನೆಯ ಹತ್ತಿರ ಸುಳಿದಾಡುತ್ತಿದ್ದು, ಆ ಹುಡುಗ ಏನಾದರೂ ಕಣ್ಣಿಗೆ ಬಿದ್ದರೆ, ಯಾವುದಾದರೂ ಉಪಾಯದಿಂದ ಅವನನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದನು.

ನಾನ್ಸಿ, ಹಾಗೇ ಆಗಲೆಂದು ಹೋಗಿ, ಅನೇಕ ದಿನ ಆ ಮನೆಯ ಬೀದಿಯಲ್ಲಿ ಹೊಂಚುಕಾಯುತ್ತಿದ್ದಳು.

ಇತ್ತ ಆಲಿವರ್ ಕಂಕುಳಲ್ಲಿ ಪುಸ್ತಕವನ್ನು ಭದ್ರವಾಗಿ ಸಿಕ್ಕಿಸಿಕೊಂಡು, ಸಂತೋಷದಿಂದ ಹೆಜ್ಜೆ ಹಾಕುತ್ತಾ ಹೋಗುತ್ತಿದ್ದ. ಹೋಗುತ್ತ ಹಾಗೆಯೇ ತಾನು ಹಿಂದೆ ಇದ್ದ ದರಿದ್ರಾವಸ್ಥೆಯನ್ನೂ ಈಗ ಅನುಭವಿಸುತ್ತಿದ್ದ ಸುಖವನ್ನೂ ಹೋಲಿಸಿ ನೋಡಿಕೊಂಡು ತೃಪ್ತಿಯಿಂದ ಉಸಿರೆಳೆದ. ಹಾಗೇ ಅವನಿಗೆ ತಾನು ಹಿಂದೆ ಹಳ್ಳಿಯಲ್ಲಿ ಬಿಟ್ಟುಬಂದ ತನ್ನ ಸ್ನೇಹಿತ ಡಿಕ್ಕನ ಜ್ಞಾಪಕವಾಯಿತು. ಪಾಪ, ಎಲ್ಲಿ ಹೊಟ್ಟೆಗಿಲ್ಲದೆ, ಏಟು ತಿಂದು, ಗೋಳಾಡುತ್ತಾ ನಿಂತಿದ್ದಾನೋ ಎಂದು ಅವನಿಗೆನ್ನಿಸಿತು.

ಹೀಗೇ ತನ್ನ ಸುಸ್ಥಿತಿಯನ್ನೂ ತಾನು ಬಿಟ್ಟುಬಂದ ಸ್ನೇಹಿತನ

ಮಃಸ್ಥಿತಿಯನ್ನೂ ಜ್ಞಾಪಿಸಿಕೊಂಡು ಹೋಗುತ್ತಿದ್ದಾಗ "ಅಬ್ಬಾ, ಸಿಕ್ಕಿದೆಯಾ ನನ್ನ ತಮ್ಮಾ!" ಎಂದು ಯಾರೋ ಕೂಗಿದುದು ಆಲಿವರನಿಗೆ ಕೇಳಿಸಿತು. ಯಾರು ಕೂಗಿದರೋ ಎಂದು ತಿರುಗಿನೋಡುವುದರೊಳಗಾಗಿ ನ್ಯಾನ್ಸಿ ಬಂದು ಅವನನ್ನು ಬಿಗಿಯಾಗಿ ತಬ್ಬಿಕೊಂಡು, "ಅಯ್ಯೋ ಮಗು, ಇಷ್ಟು ದಿನ ಎಲ್ಲಿ ತಪ್ಪಿಸಿಕೊಂಡು ಹೋಗಿದ್ದೆ?" ಎಂದಳು.

ಆಲಿವರ್ ಅವಳ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಪಡುತ್ತ "ನೀ ಯಾರು? ನೀ ಯಾರೋ ನಾನು ಕಾಣೆ. ನನ್ನ ಕೈಬಿಡು!" ಎಂದು ಬಿಡಿಸಿಕೊಳ್ಳಲು ಒದ್ದಾಡಿದ.

ನ್ಯಾನ್ಸಿ ಅವನನ್ನು ಇನ್ನೂ ಬಿಗಿಯಾಗಿ ಹಿಡಿದುಕೊಂಡು, "ಛೆಛೆ! ಹೀಗೆ ತುಂಟತನ ಮಾಡಬಹುದೆ, ಆಲಿವರ್? ಮನೆಯಲ್ಲಿ ಅಮ್ಮ ಅಪ್ಪ ನಿನ್ನನ್ನು ಕಾಣದೆ ಮೂರು ದಿವಸದಿಂದ ಊಟ ಕೂಡ ಮಾಡಿಲ್ಲ. ನನಗೂ ಮೂರು ದಿವಸದಿಂದ ನಿದ್ರೆಯಿಲ್ಲ. ನಿನ್ನನ್ನು ಎಲ್ಲೆಲ್ಲೂ ಹುಡುಕಿ ಸಾಕಾಯಿತು. ಬಾ. ಸದ್ಯಃ ಸಿಕ್ಕಿದೆಯಲ್ಲ" ಎಂದು ಒಂದೇ ಸಮನೆ ಕಳ್ಳ ಅಳು ಅಳುತ್ತಾ ಹುಚ್ಚುಹುಚ್ಚಾಗಿ ಆಡತೊಡಗಿದಳು.

ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಜನ ಸುತ್ತ ಮುತ್ತಿಕೊಂಡಿತು.

"ಇದೇನಮ್ಮ ಸಮಾಚಾರ?" ಎಂದು ಅಲ್ಲಿ ಒಬ್ಬಳು ಕೇಳಿದಳು.

ನ್ಯಾನ್ಸಿ ಅವಳಿಗೆ ಉತ್ತರವಾಗಿ "ಅಯ್ಯೋ, ಇವನು ನನ್ನ ತಮ್ಮನಮ್ಮ. ನಮ್ಮ ತಂದೆತಾಯಿ ಎಲ್ಲೋ ಕೂಲಿಗೆ ಹೋಗಿದ್ದಾಗ ಒಂದು ತಿಂಗಳ ಹಿಂದೆ ಮನೆ ಬಿಟ್ಟು ಓಡಿಹೋದವನು ಈಗ ಇಲ್ಲಿ ಸಿಕ್ಕಿದಾನೆ. ಮನೆಯವರೆಲ್ಲ ಗೋಳಾಡಿದ್ದೂ ಗೋಳಾಡಿದ್ದೆ" ಎಂದಳು.

ಸುತ್ತ ನಿಂತವರೆಲ್ಲ ಆಲಿವರನ್ನು ಛೀಗುಟ್ಟಿದರು.

ಆಲಿವರ್ ಅವರ ಮುಖಗಳನ್ನು ನೋಡಿ ಬೆದರುತ್ತ, "ಇವಳು ಹೇಳುವುದೆಲ್ಲ ಸುಳ್ಳು. ಇವಳು ಯಾರೋ ನಾನು ಕಾಣೆ. ನನಗೆ

ತಂದೆಯೂ ಇಲ್ಲ, ತಾಯಿಯೂ ಇಲ್ಲ, ನಾನು ಹುಟ್ಟಿದಂದಿನಿಂದ ತಬ್ಬಲಿಯಾಗಿ ಅನಾಥಾಲಯದಲ್ಲಿ ಬೆಳೆದವನು" ಎಂದ.

"ಅಬ್ಬಾ ಧೈರ್ಯವೇ! ಚೋಟುದ್ದ ಹುಡುಗನಿಗೆ ಎಷ್ಟು ಸುಳ್ಳು!" ಎಂದು ನ್ಯಾನ್ಸಿ ಆಶ್ಚರ್ಯಪಟ್ಟಂತೆ ನಟಿಸಿದಳು.

ಆಗ ಆಲಿವರನಿಗೆ ಅವಳ ಮುಖವನ್ನು ಎಲ್ಲೋ ನೋಡಿದ್ದೇನೆ ಎನ್ನಿಸಿತು. ತಟ್ಟನೆ ನೆನಪಾಗಿ, "ನೀನು ನ್ಯಾನ್ಸಿಯಲ್ಲವೆ?" ಎಂದ. ಅವಳನ್ನು ಒಮ್ಮೆ ಫ್ಯಾಗಿನ್ನಿನ ಕೋಣೆಯಲ್ಲಿ ನೋಡಿದ್ದೆನೆಂಬುದು ನೆನಪಾಗಿ, ಬೆಚ್ಚಿ ಹಿಮ್ಮೆಟ್ಟಿದ.

ನ್ಯಾನ್ಸಿಗೆ ಅದೇ ನೆಪ ಸಿಕ್ಕಿತು. "ನೋಡಿದಿರಾ? ಇವನಿಗೆ ನನ್ನ ಹೆಸರು ಕೂಡ ಗೊತ್ತು. ಆದರೂ ಎಷ್ಟು ಸುಳ್ಳು ಹೇಳುತ್ತಾನೆ! ಮೊದಲು ಗುರುತೇ ಇಲ್ಲವೆಂದು ಹೇಳಿದನಲ್ಲ!" ಎಂದು ಅವನನ್ನು ಹಿಡಿದೆಳೆದಳು.

ಆ ವೇಳೆಗೆ ಅಲ್ಲಿಯೇ ಹತ್ತಿರದಲ್ಲಿದ್ದ ಒಂದು ಹೆಂಡದಂಗಡಿಯಿಂದ ಒಬ್ಬ ಹೊರಗೆ ಬಂದ. ಅವನ ಕಾಲ ಹತ್ತಿರ ಒಂದು ಕ್ರೂರವಾದ ನಾಯಿ ಬಂತು. ಆ ಬಂದವನು ಸೈಕ್ಸ್ ಎಂಬವ, ಫ್ಯಾಗಿನ್ನಿನ ಕೂಟದಲ್ಲಿ ಅವನೂ ಒಬ್ಬ. ಅವನು ನ್ಯಾನ್ಸಿಯ ಸಹಾಯಕ್ಕೆ ಬಂದ.

"ಏನಿದು ಗಲಭೆ? ಏನಿದು, ಆಲಿವರ್? ನೇರವಾಗಿ ಮನೆಗೆ ಬರುವೆಯೊ? ನಿನ್ನ ಮೂಳೆ ಮುರಿದುಬಿಡಲೊ?" ಎಂದು ಸೈಕ್ಸ್ ಗರ್ಜಿಸಿದ.

ಆಲಿವರ್ ನೆರೆದಿದ್ದ ಜನರ ಕಡೆ ನೋಡುತ್ತ, "ಇವರು ಯಾರೋ ಕಾಣೆ. ನಿಮ್ಮ ದಮ್ಮಯ್ಯ. ನನ್ನನ್ನು ಕಾಪಾಡಿ" ಎಂದು ಬೇಡಿಕೊಂಡ.

ಸೈಕ್ಸ್ "ನಿನ್ನನ್ನು ಕಾಪಾಡಬೇಕೆ? ಕಾಪಾಡುತ್ತೇನೆ, ತಾಳು" ಎಂದು ಆಲಿವರನ ಕಂಕುಳಲ್ಲಿದ್ದ ಪುಸ್ತಕದ ಕಟ್ಟನ್ನು ಕಸಿದುಕೊಂಡು, ಅದರಿಂದ ಅವನ ತಲೆಗೆ ಒಂದು ಬಿಗಿದು, "ಎಲ್ಲಿ ಸಿಕ್ಕಿತೋ ನಿನಗೆ ಈ

ಪುಸ್ತಕ? ಎಲ್ಲಿಂದ ಕದ್ದುಕೊಂಡು ಬಂದೆಯೊ?" ಎಂದು ಇನ್ನೊಂದು ಬಿಗಿದ.

ಸುತ್ತ ನಿಂತಿದ್ದ ಜನರೆಲ್ಲ "ಕೊಡು, ಇನ್ನೆರಡು ಕೊಡು. ಅದಿಲ್ಲದಿದ್ದರೆ ಹುಡುಗರಿಗೆ ಬುದ್ಧಿ ಬರುವುದಿಲ್ಲ" ಎಂದು ಸೈಕ್ಸಿನ ಪಕ್ಷವಹಿಸಿ ಅವನನ್ನು ಪ್ರೋತ್ಸಾಹಿಸಿದರು.



"ಸೈಕ್ಸ್ ಮತ್ತು ನ್ಯಾನ್ಸಿ ಆಲಿವರನ್ನು ಹಿಡಿದದ್ದು"

"ಸುಮ್ಮನೆ ತಂಟೆ ಮಾಡದೆ ಮನೆಗೆ ಬರದೆಹೋದರೆ ಸಿಗಿದುಬಿಡುತ್ತೇನೆ" ಎಂದು ಸೈಕ್ಸ್ ಆಲಿವರನ್ನು ಗುದ್ದಿ, ತನ್ನ ನಾಯನ್ನು ಕೂಗಿ, "ಛೂ! ಛೂ!" ಎಂದ.

ಆಲಿವರ್ ಸುತ್ತಲೂ ನೋಡಿದ. ಯಾರ ಮುಖದಲ್ಲಿಯೂ ಸ್ವಲ್ಪವೂ ಸಹಾನುಭೂತಿ ಕಾಣಲಿಲ್ಲ. ಆಗ ತಾನೆ ಕಾಯಿಲೆಯಿಂದ ಎದ್ದು ಚೇತರಿಸಿಕೊಳ್ಳುತ್ತಿದ್ದವನು ಸೈಕ್ಸಿನ ಏಟನ್ನು ತಾಳಲಾರದೆ ಹೋದ. ಜೊತೆಗೆ ನಾಯಿ ಬೇರೆ ಮೇಲೆ ಬಿದ್ದು ಕಚ್ಚುವುದಕ್ಕೆ ಗುರ್ರೆನ್ನುತ್ತಿತ್ತು. ಅಷ್ಟು ಜನ ವಿರೋಧಿಗಳ ಮಧ್ಯೆ, ಪಾಪ, ಒಬ್ಬ ಸಣ್ಣ ಹುಡುಗ ಏನು ಮಾಡಿಯಾನು? ಏನು ಮಾಡಬೇಕೋ ತೋರದೆ, ಆಲಿವರ್ ಮಂಕಾಗಿ ನಿಂತುಕೊಂಡ. ಸೈಕ್ಸ್ ಮತ್ತು ನ್ಯಾನ್ಸಿ ಅವನನ್ನು ಫ್ಯಾಗಿನ್ನಿನ ಮನೆಗೆ ಎಳೆದುಕೊಂಡು ಹೋದರು.

ಸೈಕ್ಸ್ ಒಂದು ಕಡೆ, ನ್ಯಾನ್ಸಿ ಇನ್ನೊಂದು ಕಡೆ ಆಲಿವರನ ಕೈಯನ್ನು ಭದ್ರವಾಗಿ ಹಿಡಿದುಕೊಂಡು ಅನೇಕ ಸಂದಿಗೊಂದಿಗಳಲ್ಲಿ ನಡೆಸಿಕೊಂಡು ಹೋದರು. ಕಾಲಿನ ಹಿಂದುಗಡೆಯೇ ಸೈಕ್ಸಿನ ನಾಯಿ ಗುರುಗುಟ್ಟುತ್ತ ನಡೆಯಿತು. ಹೀಗೇ ಬಹಳ ದೂರ ಹೋದಮೇಲೆ, ಒಂದು ಕಡೆ ಒಂದು ಮುರುಕಲು ಮಳಿಗೆಯ ಬಾಗಿಲಿಗೆ "ಇದು ಬಾಡಿಗೆಗೆ ದೊರಕುತ್ತೆ" ಎಂಬ ಹಲಗೆಯನ್ನು ಬಡಿದಿದ್ದುದು ಕಂಡು, ಸೈಕ್ಸ್ ಒಂದು ಕೂಗು ಹಾಕಿದ. ಅದಕ್ಕೆ ಯಾರೋ ಉತ್ತರ ಕೊಟ್ಟರು. ಆಲಿವರನಿಗೆ ಆ ಧ್ವನಿಯನ್ನು ಹಿಂದೆ ಕೇಳಿದ್ದ ಸ್ಮರಣೆಯಾಯಿತು. ಮಳಿಗೆಯೊಳಗಿನಿಂದ ಇನ್ನೂ ಎರಡುಮೂರು ಧ್ವನಿ ಕೇಳಿಸಿತು. ಅದೆಲ್ಲವೂ ಆಲಿವರ್‌ಗೆ ಪರಿಚಿತವಾದಂತೆ ಇತ್ತು.

ಸ್ವಲ್ಪ ಹೊತ್ತಿನಲ್ಲಿಯೇ ಯಾರೋ ಒಂದು ದೀಪ ಹಿಡಿದುಕೊಂಡು ಬಂದು, ಮಳಿಗೆಯ ಬಾಗಿಲನ್ನು ತೆಗೆದರು. ತೆಗೆದವನು ನಮ್ಮ ಹಳೆಯ ಸ್ನೇಹಿತ, ಕಳ್ಳಕೊರಮ. "ಬನ್ನಿ, ಬನ್ನಿ" ಎಂದು ಆಲಿವರನ್ನು ಕರೆದ.

ತನ್ನನ್ನು ಸೆರೆ ಹಿಡಿದಿದ್ದ ಇಬ್ಬರ ನಡುವೆ ಆಲಿವರ್ ಫ್ಯಾಗಿನ್ನಿನ ಮನೆಯೊಳಕ್ಕೆ ಪುನಃ ಕಾಲಿಟ್ಟ.



"ಫ್ಯಾಗಿನ್ನಿನ ಗುಹೆಯಲ್ಲಿ ಆಲಿವರ್"

ಒಳಕ್ಕೆ ಹೋದೊಡನೆಯೆ ಚಾರ್ಲಿ ಬೇಟ್ಸ್ ಆಲಿವರನ್ನೂ ಅವನ ಹೊಸ ಬಟ್ಟೆಬರೆಗಳನ್ನೂ ಕಂಡು, ಗುಡುಗುಡನೆ ನಗತೊಡಗಿದನು. "ಫ್ಯಾಗಿನ್, ಅವನ ಅಂಗಿ ನೋಡು! ಹೊ ಹೊ ಹೋ! ಫ್ಯಾಗಿನ್, ಅವನ ಷರಾಯಿ ನೋಡು! ಹೊ ಹೊ ಹೋ!" ಎಂದು ನಗುವನ್ನು ತಡೆಯಲಾರದೆ ನೆಲದ ಮೇಲೆ ಬಿದ್ದು ಬಿದ್ದು ಹೊರಳಿಯಾಡಿದ.

ಅನಂತರ, ನಗು ಸ್ವಲ್ಪ ನಿಂತ ಮೇಲೆ ಎದ್ದು ಬಂದು ಆಲಿವರನ್ನು ಪ್ರದಕ್ಷಿಣೆಮಾಡಿ, ಅವನನ್ನು ತಿರುಗಿಸಿ ತಿರುಗಿಸಿ ನೋಡಿದ. ಫ್ಯಾಗಿನ್ ಆಲಿವರನಿಗೆ ನಡುಬಗ್ಗಿ ನಾಲ್ಕಾರು ಸಲ ನಮಸ್ಕಾರ ಮಾಡಿದ. ಕೊರಮ ಮಾತ್ರ ಆಲಿವರನ ಹತ್ತಿರ ಬಂದು ಅವನ ಜೇಬುಗಳನ್ನೆಲ್ಲಾ ಶೋಧಿಸಿದ.

ಫ್ಯಾಗಿನ್ ಪುನಃ ಪುನಃ ಆಲಿವರನಿಗೆ ಬಗ್ಗಿ ನಮಸ್ಕಾರ ಮಾಡುತ್ತಾ, "ಬರಬೇಕು, ಬರಬೇಕು, ಮುದ್ದುಮಗು. ' ಎಷ್ಟು ದಿನವಾಯಿತು ನಿನ್ನ ಮುಖ ನೋಡಿ! ಹೋದವನು ನಿನ್ನ ಕ್ಷೇಮಸಮಾಚಾರಕ್ಕೆ ಒಂದು ಕಾಗದ ಬರೆಯಬಾರದೆ! ಬರುವವನು ಮೊದಲೇ ಯಾರ ಹತ್ತಿರವಾದರೂ ಹೇಳಿಕಳುಹಿಸಿದ್ದರೆ, ಬಿಸಿಬಿಸಿಯಾಗಿ ಏನಾದರೂ ತಿಂಡಿ ಮಾಡಿ ಇಡಬಹು ದಾಗಿತ್ತು" ಎಂದು ಅವನನ್ನು ಅಣಕಿಸಿದ.

ಫ್ಯಾಗಿನ್ನಿನ ಆ ಮಾತು ಕೇಳಿ ಚಾರ್ಲಿ ಪುನಃ ಗಟ್ಟಿಯಾಗಿ ನಗ ತೊಡಗಿದ. ಅವನ ನಗುವಿನ ಸಹವಾಸವನ್ನು ತಡೆಯಲಾರದೆ ಫ್ಯಾಗಿನ್ ಕೂಡ ನಗತೊಡಗಿದ. ಅದೇ ಸಮಯದಲ್ಲಿ, ಆಲಿವರನ ಜೇಬುಗಳನ್ನು ಶೋಧಿಸುತ್ತಿದ್ದ ಕೊರಮನಿಗೆ ಅವನ ಒಳಜೇಬಿನಲ್ಲಿದ್ದ ಐದು ಪೌಂಡು ನೋಟು ಸಿಕ್ಕಿ, ಅವನೂ ನಗತೊಡಗಿದ.

ಆದರೆ ಆಲಿವರನ ಜೇಬಿನಲ್ಲಿದ್ದ ಹಣ ಕೊರಮನ ಕೈಯನ್ನು ಸೇರು ವುದರೊಳಗಾಗಿ ಫ್ಯಾಗಿನ್ ಅದನ್ನು ತಾನು ಕಿತ್ತಿಟ್ಟುಕೊಂಡ. ಅದು ಅವನ ಕೈಯಲ್ಲಿ ಅಡಗುವುದರೊಳಗಾಗಿ ಬಿಲ್ ಸೈಕ್ಸ್ ಎರಡು ಹೆಜ್ಜೆ ಮುಂದೆ ಬಂದು, "ಎಲ್ಲಿ, ಫ್ಯಾಗಿನ್? ಇಲ್ಲಿ ಕೊಡು. ಅದು ನನ್ನದು" ಎಂದ.

"ಛೆಛೆ! ಇದು ನನ್ನದು, ಬಿಲ್. ನೀನು ಬೇಕಿದ್ದರೆ ಆ ಪುಸ್ತಕ ಗಳನ್ನು ಇಟ್ಟುಕೊ" ಎಂದ ಫ್ಯಾಗಿನ್.

"ಕೊಡು, ಕೊಡು. ಒಳ್ಳೆಯ ಮಾತಿನಲ್ಲಿ ಕೊಟ್ಟುಬಿಡು" ಎಂದು ಸೈಕ್ಸ್ ಫ್ಯಾಗಿನ್ನಿನ ಮುಚ್ಚಿದ ಮುಷ್ಟಿಯನ್ನು ಹಿಡಿದ.

"ಇದು ನ್ಯಾಯುವೆ, ಸೈಕ್ಸ್? ಇದು ಧರ್ಮವೇ, ನ್ಯಾನ್ಸಿ?" ಎಂದು ಫ್ಯಾಗಿನ್ ಗೋಗರೆದ.

"ನ್ಯಾಯವೋ ಧರ್ಮವೋ ನನಗೇನು ಗೊತ್ತು? ನನಗೆ ಗೊತ್ತಿರುವುದು ಇಷ್ಟೇ. ಈ ಹಣ ನನ್ನದು" ಎಂದು ಸೈಕ್ಸ್ ಫ್ಯಾಗಿನ್ನಿನ ಮುಷ್ಟಿಯಿಂದ ಆ ಐದು ಪೌಂಡಿನ ನೋಟನ್ನು ಕಸಿದುಕೊಂಡು, ತನ್ನ ಕರವಸ್ತ್ರದ ಮೂಲೆಯಲ್ಲಿ ಬಿಗಿದು ಕಟ್ಟಿಕೊಂಡ. "ನಾನೂ ಮತ್ತು ನ್ಯಾನ್ಸಿ ಪಟ್ಟ ಶ್ರಮಕ್ಕೆ ನೀನು ಇನ್ನೂ ಐದು ಪೌಂಡು ಕೊಡಬೇಕು. ನಿನಗೆ ಅಷ್ಟು ಪ್ರಿಯವಾಗಿದ್ದರೆ, ಪುಸ್ತಕಗಳನ್ನು ನೀನೇ ಇಟ್ಟುಕೊ" ಎಂದ.

ಹೀಗೆ, ತನ್ನ ಜೇಬಿನಲ್ಲಿದ್ದ ಹಣವೂ ತನ್ನ ಕೈಯಲ್ಲಿದ್ದ ಪುಸ್ತಕಗಳೂ ಪರತಂತ್ರವಾದುದನ್ನು ಕಂಡು ಆಲಿವರ್ ಸಂಕಟದಿಂದ ಕೈ ಕೈ ಹಿಸುಕಿಕೊಳ್ಳುತ್ತಾ, "ಅಯ್ಯೋ, ಅಯ್ಯೋ, ಅದು ನನ್ನದಲ್ಲ. ಅದು ಆ ಬ್ರೌನ್ಲೋ ಮಹಾಶಯನದು. ನಾನು ಕಾಯಿಲೆ ಮಲಗಿದಾಗ ಆತ ನನಗೆ ಎಷ್ಟು ಆರೈಕೆ ಮಾಡಿ ನನ್ನ ಜೀವವನ್ನು ಉಳಿಸಿದ! ದಯವಿಟ್ಟು ಆ ಹಣವನ್ನೂ ಆ ಪುಸ್ತಕಗಳನ್ನೂ ಅವನಿಗೆ ಕಳುಹಿಸಿಬಿಡಿ. ನನ್ನನ್ನು ಬೇಕಾದರೆ ನಿಲ್ಲಿಸಿಕೊಳ್ಳಿ. ಆದರೆ ಅವನ ವಸ್ತುಗಳನ್ನು ಮಾತ್ರ ಅವನಿಗೆ ಹಿಂದಕ್ಕೆ ಕಳುಹಿಸಿಬಿಡಿ. ಅವನೂ ಆ ಮನೆಯ ಮುದುಕಿಯೂ ನಾನು ಇವನ್ನು ಕದ್ದುಕೊಂಡು ಓಡಿ ಹೋದೆನೆಂದುಕೊಳ್ಳುತ್ತಾರೆ. ದಯಮಾಡಿ ಅವುಗಳನ್ನು ಕಳುಹಿಸಿಕೊಡಿ" ಎಂದು ಬೇಡಿಕೊಳ್ಳುತ್ತ ಫ್ಯಾಗಿನ್ನಿನ ಕಾಲುಗಳನ್ನು ಕಟ್ಟಿಕೊಂಡನು.

"ಬಹಳ ಒಳ್ಳೆಯದಾಯಿತು. ಇವನು ಕದ್ದು ಓಡಿಹೋದನೆಂದು ಆ ಮುದುಕಿ ತಿಳಿದುಕೊಂಡರೆ ಇನ್ನೂ ಅನುಕೂಲವಾಯಿತು. ಇಂಥ ಕಳ್ಳನನ್ನು ಅವರು ಬೇರೆ ಇನ್ನು ಹುಡುಕಿಕೊಂಡು ಬರುವುದಿಲ್ಲ" ಎಂದು ಬಿಲ್ ಸೈಕ್ಸ್ ಮತ್ತು ಫ್ಯಾಗಿನ್ ಮಾತನಾಡಿಕೊಂಡರು.

ಆಲಿವರ್ ಒಬ್ಬರ ಕಡೆಯಿಂದ ಇನ್ನೊಬ್ಬರ ಕಡೆಗೆ ನೋಡಿದ. ಯಾರೂ ತನ್ನ ಸಹಾಯಕ್ಕೆ ಬರುವಂತೆ ಕಾಣಲಿಲ್ಲ. ಹೇಗಾದರೂ ಮಾಡಿ

ಇಲ್ಲಿಂದ ತಪ್ಪಿಸಿಕೊಳ್ಳಬೇಕು ಎಂದುಕೊಂಡು, ಆಲಿವರ್ ದಿಗ್ಗನೆ ಎದ್ದು "ಅಯ್ಯೋ!" ಎಂದು ಕೂಗಿಕೊಂಡು ಕೊಠಡಿಯಿಂದ ಓಡಿದ.

ಒಡನೆಯೇ ಫ್ಯಾಗಿನ್, ಕಳ್ಳಕೊರವು, ಚಾರ್ಲಿ ಮೂವರೂ ಅವನ ಹಿಂದೆಯೇ ಓಡಿದರು. ಸೈಕ್ಸಿನ ನಾಯಿ ತಾನೂ ಹಾರಿತು. ಆದರೆ ಅಷ್ಟರೊಳಗೆ ನ್ಯಾನ್ಸಿ ಅಡ್ಡ ಬಂದು, ಬಾಗಿಲು ಮುಚ್ಚಿ, "ಬಿಲ್, ಈ ನಾಯಿಯನ್ನು ತಡೆ. ಪಾಪ, ಹುಡುಗನನ್ನು ಸೀಳಿಬಿಡುತ್ತದೆ!" ಎಂದಳು.

"ಸೀಳಲೇಳು! ದಾರಿ ಬಿಡು!" ಎಂದು ಸೈಕ್ಸ್ ಗರ್ಜಿಸುತ್ತ ಬಾಗಿಲ ಬಳಿ ಬಂದ.

"ನೀನು ಆ ನಾಯಿಯನ್ನು ಹಿಡಿದಿಡುವವರೆಗೂ ನಾನು ದಾರಿ ಬಿಡುವುದಿಲ್ಲ. ನನ್ನನ್ನು ನೀನು ಕೊಂದರೂ ಸರಿಯೆ, ಆ ಸಣ್ಣ ಹುಡುಗನನ್ನು ನೀವು ಪೀಡಿಸುವುದು ನನಗೆ ಸಮ್ಮತವಲ್ಲ" ಎಂದಳು, ನ್ಯಾನ್ಸಿ.

"ನಿನ್ನನ್ನು ಕೊಂದರೂ ಸರಿಯೆ" ಎಂದು ಸೈಕ್ಸ್ ಹಲ್ಲು ಕಡಿಯುತ್ತ, ಒಂದು ಕೈಯಿಂದ ನ್ಯಾನ್ಸಿಯ ರೆಟ್ಟೆಯನ್ನು ಹಿಡಿದೆಳೆದು ಬಿಸುಟ. ನ್ಯಾನ್ಸಿ ಒಂದು ಮೂಲೆಯಲ್ಲಿ ರಪ್ಪನೆ ಹೋಗಿ ಬಿದ್ದಳು.

ಅದೇ ಗಳಿಗೆಯಲ್ಲೆ ಫ್ಯಾಗಿನ್ನನೂ ಅವನ ಇಬ್ಬರು ಆಪ್ತ ಶಿಷ್ಯರೂ ಆಲಿವರನ್ನು ದರದರನೆ ಎಳೆದುಕೊಂಡು ಕೋಣೆಯೊಳಕ್ಕೆ ತಂದರು.

"ಅಹ್ಹಾ! ತಪ್ಪಿಸಿಕೊಂಡು ಓಡುತ್ತಿದ್ದೆಯಲ್ಲವೆ?" ಎಂದು ಫ್ಯಾಗಿನ್ ವಿಕಾರವಾಗಿ ನಗುತ್ತಾ, ಮೂಲೆಯಲ್ಲಿದ್ದ ಒಂದು ಮುಳ್ಳುಗಂಟಿನ ದೊಣ್ಣೆಯನ್ನು ಕೈಗೆತ್ತಿಕೊಂಡು, ಆಲಿವರನ ಕಡೆಗೆ ಬಂದ. ಆಲಿವರನಿಗೆ ಉಸಿರು ಬಿಡುವುದು ಕಷ್ಟವಾಗಿತ್ತು. ಫ್ಯಾಗಿನ್ನನ ರೀತಿಯನ್ನೂ ಅವನ ಕೈಲಿದ್ದ ದೊಣ್ಣೆಯನ್ನೂ ನೋಡಿ ಅವನ ಹೃದಯ ಕಳಕ್ಕೆಂದಿತು. ಮಂತ್ರದಿಂದ ಮೋಹಗೊಂಡ ಹಾವಿನ ಹಾಗೆ ಫ್ಯಾಗಿನ್ನನ ಕೈಯಲ್ಲಿದ್ದ ಕೋಲನ್ನೇ ದೃಷ್ಟಿಸುತ್ತಿದ್ದ.

"ಓಡುತ್ತಿದ್ದೆ ಅಲ್ಲವೆ? ಎಲ್ಲಿಗೆ ಓಡುತ್ತಿದ್ದೆಯೊ?" ಎಂದು ಫ್ಯಾಗಿನ್ ಕೈಲಿದ್ದ ದೊಣ್ಣೆಯಿಂದ ಆಲಿವರನ ಬೆನ್ನಿಗೆ ಒಂದು ಬಾರಿಸಿದ.

ಹೀಗೆ ಅನ್ಯಾಯವಾಗಿ ಅವನನ್ನು ಚಚ್ಚುವುದನ್ನು ಸುಮ್ಮನೆ ನಿಂತು ನೋಡಲಾರದೆ ನ್ಯಾನ್ಸಿ ರೋಷದಿಂದ ಮೊರೆಯುತ್ತ ಬಂದು, ಫ್ಯಾಗಿನ್ನಿನ ಕೈಲಿದ್ದ ದೊಣ್ಣೆಯನ್ನು ಕಿತ್ತುಕೊಂಡು, ರಪಾರೆಂದು ಬೆಂಕಿಗೆ ಎಸೆದಳು. ಎಸೆದ ಜೋರಿಗೆ ಕೋಣೆಯ ತುಂಬ ಬೆಂಕಿಯು ಕಿಡಿ ಕೆದರಿದುವು.

ನ್ಯಾನ್ಸಿ ಅದೇ ರೋಷದಿಂದ "ಆ ಹುಡುಗನ ತಂಟೆಗೆ ಯಾರಾದರೂ ಹೋದೀರಿ! ನನ್ನನ್ನು ಗಲ್ಲಿಗೆ ಹಾಕಿದರೂ ಸರಿಯೆ, ನಿಮ್ಮಲ್ಲಿ ಯಾರ ನ್ನಾದರೂ ತೀರಿಸಿಯೇ ಬಿಡುತ್ತೇನೆ" ಎಂದು ಬುಸುಗುಟ್ಟಿದಳು.

ಫ್ಯಾಗಿನ್ ಮತ್ತು ಬಿಲ್ ಸೈಕ್ಸ್ ಒಬ್ಬರೊಬ್ಬರ ಮುಖ ನೋಡಿ ಕೊಂಡರು.

ಫ್ಯಾಗಿನ್ "ಇದೇನಿದು, ನ್ಯಾನ್ಸಿ, ಹುಡುಗನ ಮೇಲೆ ಇಷ್ಟು ಪ್ರೀತಿ? ಹಾಗಾದರೆ ಅವನನ್ನು ನೀನು ಕರೆದುಕೊಂಡು ಬಂದುದಾದರೂ ಏಕೆ?" ಎಂದು ಗಹಗಹಿಸಿ ನಕ್ಕ.

"ಇಲ್ಲಿ ಹೀಗಾಗುತ್ತದೆ ಎಂದು ತಿಳಿದಿದ್ದರೆ, ನನ್ನಾಣೆ ನಾನು ಬೇರೆ ಅವನನ್ನು ಮುಟ್ಟುತ್ತಿರಲಿಲ್ಲ. ಅವನನ್ನು ಕರೆತಂದದ್ದಾಯಿತು, ಕಳ್ಳತನ ಕಲಿಸಿ ಕುಲ ಕೆಡಿಸಿದ್ದಾಯಿತು. ಇನ್ನೇನು ಬೇಕು? ಅವನನ್ನು ಏಕೆ ವೃಥಾ ಚಚ್ಚಬೇಕು? ನಾನೂ ನಿಮ್ಮ ಹಾಳು ಕೊಂಪೆಗೆ ಸೇರುವಾಗ ಇವನಿಗಿಂತ ಚಿಕ್ಕವಳಾಗಿದ್ದೆ. ಈ ದಿವಸ ನನ್ನ ಕತೆ ಏನಾಗಿದೆ, ನೋಡು. ಯಾರುಯಾರನ್ನು ಹಾಳುಮಾಡಿದರೂ ನಿನಗೆ ತೃಪ್ತಿಯಿಲ್ಲವಲ್ಲ!" ಎಂದು ನ್ಯಾನ್ಸಿ ಫ್ಯಾಗಿನ್ನಿನ ಕಡೆಗೆ ಹಾಯ್ದಳು.

ಫ್ಯಾಗಿನ್ ಅವಳ ಕೈಗೆ ಸಿಕ್ಕಿದ್ದರೆ ಏನಾಗುತ್ತಿದ್ದನೋ ಹೇಳು ವಂತಿಲ್ಲ. ಆದರೆ ಅಷ್ಟರಲ್ಲಿಯೇ ಬಿಲ್ ಸೈಕ್ಸ್ ಮುಂದೆ ನುಗ್ಗಿ, ಅವಳ ಕೈಗಳನ್ನು ಬಲವಾಗಿ ಬಿಗಿಹಿಡಿದ. ಅವನ ಹಿಡಿತದ ತೀವ್ರತೆಯನ್ನು

ತಡೆಯಲಾರದೆ, ನ್ಯಾನ್ಸಿ ಅಲ್ಲೇ ಮೂರ್ಛೆಹೋದಳು. ಸೈಕ್ಸ್ ಅವಳನ್ನು ಒಂದು ಕಡೆ ಮಲಗಿಸಿ, "ಅಬ್ಬಬ್ಬ! ಏನು ಹೆಣ್ಣು!" ಎಂದ.

"ಈ ಹೆಂಗಸರನ್ನು ಸೇರಿಸಿಕೊಂಡರೆ ಹೀಗೇ!" ಎಂದು ಫ್ಯಾಗಿನ್ ಗೊಣಗಿ, "ಚಾರ್ಲಿ, ಆಲಿವರನಿಗೆ ಹಾಸಿಗೆ ಹಾಸಿಕೊಡು" ಎಂದ.

ಚಾರ್ಲಿ ಆಲಿವರನ್ನು ಪಕ್ಕದ ಅಡುಗೆಯ ಮನೆಗೆ ಕರೆದುಕೊಂಡು ಹೋದ. "ಹೊಸ ಬಟ್ಟೆ ಹಾಕಿಕೊಂಡು ಹಾಗೇ ಮಲಗಿದರೆ ಎಲ್ಲ ಹೊಲಸಾಗಿ ಹೋಗುತ್ತದೆ" ಎಂದು ಹೇಳಿ, ಆಲಿವರ್ ಹಾಕಿಕೊಂಡಿದ್ದ ವಸ್ತ್ರಗಳನ್ನು ತೆಗೆಯಿಸಿ, ಎಲ್ಲಿಂದಲೋ ಮೂಲೆಯಿಂದ ಕೆಲವು ಹರಕು ಬಟ್ಟೆಗಳನ್ನು ತೆಗೆದು, "ಇದನ್ನು ಹಾಕಿಕೋ" ಎಂದು ಕೊಟ್ಟ. ಆಲಿವರ್, ಪಾಪ, ಬೇರೆ ಏನೂ ಉಪಾಯ ಕಾಣದೆ, ತನ್ನ ಬಟ್ಟೆಗಳನ್ನು ತೆಗೆದು ಹಾಕಿ, ಅವನು ಕೊಟ್ಟ ಕೊಳೆ ಬಟ್ಟೆಗಳನ್ನು ಹಾಕಿಕೊಂಡು, ಅವನು ತೋರಿಸಿದ ಹರಕು ಹಾಸಿಗೆಯ ಮೇಲೆ ಉರುಳಿಕೊಂಡ.

ಚಾರ್ಲಿ ಆಲಿವರ್ ಕಳೆದ ಹೊಸಬಟ್ಟೆಗಳನ್ನು ಗಂಟುಕಟ್ಟಿಕೊಂಡು, "ಇವುಗಳನ್ನು ಹಳೆ ಬಟ್ಟೆಯಂಗಡಿಯವನಿಗೆ ಮಾರಿದರೆ ಎಷ್ಟು ಹಣ ಬರ ಬಹುದು" ಎಂದು ಲೆಕ್ಕಾಚಾರಮಾಡುತ್ತ, ಅಟ್ಟಹಾಸದಿಂದ ನಗತೊಡಗಿದ.

ಅವನ ಆ ಆರ್ಭಟ ಕೇಳಿ ಗಾಢನಿದ್ರೆಯಲ್ಲಿದ್ದವರು ಕೂಡ ಎಚ್ಚೆತ್ತಿರ ಬೇಕು. ಆದರೆ ಅಂದಿನ ಘಟನೆಗಳಿಂದ ದೈಹಿಕವಾಗಿಯೂ ಮಾನಸಿಕ ವಾಗಿಯೂ ಆಯಾಸಗೊಂಡಿದ್ದ ಆಲಿವರ್, ಮಲಗಿದೊಡನೆ ಎಲ್ಲವನ್ನೂ ಮರೆತು, ಕ್ಷಣದಲ್ಲಿ ನಿದ್ರೆಗೆ ವಶನಾದನು.

## ಬ್ರೌನ್ಲೊ ಕಳವಳ

ಇತ್ತ ಬ್ರೌನ್ಲೊ ಮತ್ತು ಗ್ರಿಮ್‌ವಿಗ್ ಆಲಿವರಿಗಾಗಿ ಕಾದು ಕುಳಿತರು. ಆಲಿವರ್ ಹಿಂದಿರುಗಿ ಬಾರದಿದ್ದುದನ್ನು ಕಂಡು ಗ್ರಿಮ್‌ವಿಗ್ "ನಾನೇನು ಹೇಳಿದೆ?" ಎಂದ. ಆದರೆ, ಪಾಪ, ಹುಡುಗ ಏನಾದನೋ ಎಂದು

ಬ್ರೌನ್ಲೋವಿಗೆ ತುಂಬ ಕಳವಳ. ಗ್ರಿಮ್‌ವಿಗ್ ಹೇಳಿದಂತೆ ಆ ಹುಡುಗ ತನಗೆ ಮೋಸ ಮಾಡಿರಬಹುದೆಂಬುದನ್ನು ಅವನ ಮನಸ್ಸು ಒಪ್ಪದು. ಏನು ಅಡಚಣೆಯಾಯಿತೋ, ಹುಡುಗನಿಗೆ ಏನು ಅಪಾಯ ಬಂದಿತೋ ಎಂದು ಅವನಿಗೆ ಏನೋ ಭೀತಿ, ಶಂಕೆ.

ಅದರಿಂದಾಗಿ, ಬ್ರೌನ್ಲೊ, ಮಾರನೆಯ ದಿವಸ "ಆಲಿವರ್ ಟ್ವಿಸ್ಟ್ ಎಂಬ ಚಿಕ್ಕ ಹುಡುಗ ಕಳೆದ ಗುರುವಾರ ಸಂಜೆ ಮನೆಯಿಂದ ಹೊರಟವನು ತಪ್ಪಿಸಿಕೊಂಡಿದ್ದಾನೆ. ಅವನು ಏನಾದನೆಂಬುದನ್ನು ತಿಳಿಯಲು ಸಹಾಯ ವಾಗುವ ಸುದ್ದಿಯನ್ನು ತರುವವರಿಗೆ ಅಥವಾ ಅವನ ಪೂರ್ವೋತ್ತರಗಳನ್ನು ತಿಳಿಸುವವರಿಗೆ ಐದು ಗಿನಿಗಳನ್ನು ಬಹುಮಾನವಾಗಿ ಕೊಡಲಾಗುತ್ತದೆ" ಎಂದು ತನ್ನ ವಿಳಾಸವನ್ನು ಕೊಟ್ಟು, ಪತ್ರಿಕೆಗಳಲ್ಲಿ ಪ್ರಸಿದ್ಧಿಪಡಿಸಿದನು.

ಆ ಪ್ರಸಿದ್ಧಿಪತ್ರವನ್ನು ಬಂಬಲ್ ಮಾರನೆಯ ದಿನ ನೋಡಿದ. ಅದರಲ್ಲಿ ಆಲಿವರನ ವರ್ಣನೆಯೂ ಇತ್ತು. "ಒಹ್ಹೋ" ಎಂದ ಬಂಬಲ್. ದೊಡ್ಡದಾಗಿ ಕಣ್ಣು ಬಿಟ್ಟು, ಎರಡನೆಯ ಬಾರಿ, ಮೂರನೆಯ ಬಾರಿ ಓದಿ ನೋಡಿದ. ಪುನಃ "ಒಹ್ಹೋ!" ಎಂದ. "ನಮ್ಮ ಹಳೆಯ ಅಪರಾಧಿ!" ಎಂದ.

ಆಲಿವರನ ಹೆಸರು ಬಂಬಲನ್ನು ಬ್ರೌನ್ಲೋ ಮನೆಗೆ ಕರೆದೊಯ್ದಿತು. ಐದು ಗಿನಿಗಳ ಹೆಸರು ಬಂಬಲನ್ನು ಬ್ರೌನ್ಲೊ ಮನೆಗೆ ಎಳೆದೊಯ್ದಿತು.

"ಬ್ರೌನ್ಲೊ ಮನೆಯಲ್ಲಿ ಇದ್ದಾರೆಯೆ?" ಎಂದು ಬಂಬಲ್ ತಾನು ಬಂದ ಕಾರಣವನ್ನು ಹೇಳುತ್ತಾ ಆಲಿವರನ ಹೆಸರು ಎತ್ತಿದೊಡನೆಯೆ ಬಾಗಿಲು ತೆಗೆದ ಕೆಲಸದ ಹುಡುಗಿ ಓಡಿಹೋಗಿ ಬ್ರೌನ್ಲೋಗೆ ತಿಳಿಸಿದಳು. ಬ್ರೌನ್ಲೊ ಬಂಬಲನ್ನು ಒಳಕ್ಕೆ ಬರಮಾಡಿಕೊಂಡ.

ಬಂಬಲ್ ಒಳಕ್ಕೆ ಬಂದಾಗ, ಬ್ರೌನ್ಲೊ ಮತ್ತು ಗ್ರಿಮ್‌ವಿಗ್ ಇಬ್ಬರೂ ಕುಳಿತಿದ್ದರು. ಬಂಬಲನ್ನು ಕಂಡೊಡನೆಯೆ ಗ್ರಿಮ್‌ವಿಗ್ "ಇವನು ಯಾವುದೋ ಅನಾಥಾಲಯದ ಅಧಿಕಾರಿ. ಈ ಮಾತು ಸುಳ್ಳಾದರೆ,

ನನ್ನನ್ನು ಕೊಂದು ತಿಂದಾಣೆ" ಎಂದುಕೊಂಡು, "ನೀನು ಯಾವು ದಾದರೂ ಅನಾಥಾಲಯದ ಅಧಿಕಾರಿಯೆ?" ಎಂದು ಕೇಳಿಯೇಬಿಟ್ಟ. ಬಂಬಲ್ ಹೌದೆನ್ನಲು, "ನನಗೆ ಮೊದಲೇ ಗೊತ್ತು!" ಎಂದು ಗ್ರಿಮ್‌ವಿಗ್ ತನ್ನ ಜಾಣತನಕ್ಕೆ ತಾನೇ ತುಂಬ ಸಂತೋಷಪಟ್ಟ.

ಬ್ರೌನ್ಲೊ ಸ್ನೇಹಿತನ ಮಾತನ್ನು ನಿಲ್ಲಿಸಿ, ಬಂಬಲನ್ನು ಬಹಳ ಕಾತರ ದಿಂದ "ಆ ಹುಡುಗ ಈಗ ಎಲ್ಲಿ ಇದ್ದಾನೆ?" ಎಂದು ಕೇಳಿದ.

"ನನಗೆ ಏನೂ ಗೊತ್ತಿಲ್ಲ" ಎಂದ ಬಂಬಲ್.

"ಹಾಗಾದರೆ, ಅವನ ವಿಚಾರವಾಗಿ ನಿನಗೆ ಏನು ಗೊತ್ತು? "ಏನಾದರೂ ಗೊತ್ತಿದ್ದರೆ, ಹೇಳು" ಎಂದು ಬ್ರೌನ್ಲೊ ಸ್ವಲ್ಪ ಅಸಹನೆ ಯಿಂದ ಕೇಳಿದ.

ಬಂಬಲ್ ತನ್ನ ಟೋಪಿಯನ್ನು ಪಕ್ಕದ ಮೇಜಿನ ಮೇಲಿಟ್ಟು, ಕೋಲನ್ನು ಮೂಲೆಯಲ್ಲಿ ಒರಗಿಸಿ, ಕೈಗಳನ್ನು ಎದೆಯ ಮೇಲೆ ಬಿಗಿದು, ಎರಡು ನಿಮಿಷ ಮೌನವಾಗಿದ್ದು, ಅನಂತರ ತನ್ನ ಕತೆಯನ್ನು ಹೇಳ ತೊಡಗಿದನು.

ಆಲಿವರ್ ಹುಟ್ಟಿದ್ದು ಮೊದಲುಗೊಂಡು ಅವನು ಎಷ್ಟು ತಿಂದರೂ ತೃಪ್ತನಾಗದೆ 'ಇನ್ನಷ್ಟು' ಎಂದು ಕೇಳಿದ್ದು, ಯಾವ ಕಸುಬನ್ನು ಕಲಿಯು ವುದಕ್ಕೂ ಇಷ್ಟಪಡದೆ ನ್ಯಾಯಾಧಿಪತಿಯ ಮುಂದೆ ಸುಳ್ಳು ಹೇಳಿದ್ದು, ಸವರ್‌ಬೆರಿಯ ಮನೆಯಲ್ಲಿ ನಿಷ್ಕಾರಣವಾಗಿ ನೋಹನನ್ನು ಹಿಡಿದು ಚಚ್ಚಿದ್ದು, ತನಗೆ ಅನ್ನ ಬಟ್ಟೆ ಕೊಟ್ಟ ಆ ಸವರ್‌ಬೆರಿಯ ಮನೆಯಿಂದ ರಾತ್ರಿವೇಳೆಯಲ್ಲಿ ಹೇಳದೆ ಕೇಳದೆ ಓಡಿಹೋದದ್ದು—ಇದೆಲ್ಲವನ್ನೂ ಬಂಬಲ್ ವರ್ಣಿಸಿದ.

ಅವನ ಮಾತುಗಳನ್ನು ಕೇಳುತ್ತ ಕೇಳುತ್ತ ಬ್ರೌನ್ಲೊ ನಿಟ್ಟುಸಿರು ಬಿಟ್ಟು, "ಹಾಗಾದರೆ ಆ ಹುಡುಗ ನನಗೂ ಮೋಸ ಮಾಡಿದನೆಂಬುದು ನಿಜ. ಕೃತಘ್ನ!" ಎಂದುಕೊಂಡು, ಬಂಬಲನ ಕೈಯಲ್ಲಿ ಐದು ಗಿನಿ

ಗಳನ್ನಿಟ್ಟು, "ಆ ಹುಡುಗನ ವಿಷಯದಲ್ಲಿ ನನಗಿದ್ದ ತಪ್ಪು ಅಭಿಪ್ರಾಯ ಗಳನ್ನು ಹೋಗಲಾಡಿಸಿದ್ದರೆ ನಿನಗೆ ಇನ್ನೂ ದೊಡ್ಡ ಬಹುಮಾನ ಕೊಡು ತ್ತಿದ್ದೆ" ಎಂದ.

ಹೀಗೆಂದು ಹೇಳಿ, ಬಂಬಲನ್ನು ಕಳುಹಿಸಿಯಾದ ಮೇಲೆ, ಬಹು ಚಿಂತಾಕ್ರಾಂತನಾಗಿ ಕೋಣೆಯಲ್ಲಿ ಸುಮ್ಮನೆ ಆ ಕಡೆಯಿಂದ ಈ ಕಡೆಗೆ ಶತಪಥ ತಿರುಗಿದ. ಅವನ ಚಿಂತೆಯ ತೀವ್ರತೆಯನ್ನು ನೋಡಿ, ಗ್ರಿಮ್‌ವಿಗ್ ಕೂಡ ಅವನನ್ನು ಕೀಟಲೆ ಮಾಡದೆ ಸುಮ್ಮನೆ ಇದ್ದುಬಿಟ್ಟ.

ಸ್ವಲ್ಪ ಹೊತ್ತಾದ ಮೇಲೆ ಬ್ರೌನ್ಲೊ, ಆಲಿವರನಿಗೆ ಅನಾರೋಗ್ಯ ವಾದಾಗ ಆರೈಕೆ ಮಾಡಿದ ಮುದುಕಿಯನ್ನು ಕರೆದು, "ಕೇಳಿದೆಯ? ಆಲಿವರ್ ಶುದ್ಧ ಮೋಸಗಾರ!" ಎಂದನು.

"ಛೆಛೆ! ಎಲ್ಲಿಯಾದರೂ ಉಂಟೆ? ಎಂದಿಗೂ ಸಾಧ್ಯವಿಲ್ಲ!" ಎಂದು ಅವಳು ಆವೇಶದಿಂದ ಆಲಿವರನ ಪಕ್ಷ ಹಿಡಿದು ವಾದಿಸಿದಳು.

"ಅವನು ಮೋಸಗಾರ, ಕೃತಘ್ನ ಎಂದು ನಾನು ಹೇಳುತ್ತೇನೆ. ಅವನು ಹುಟ್ಟಿ ಬೆಳೆದ ಅನಾಥಾಲಯದ ಅಧಿಕಾರಿ ಈಗ ತಾನೆ ಬಂದು ಅವನ ಪೂರ್ವಕಥೆಯೆಲ್ಲವನ್ನೂ ಹೇಳಿ ಹೋಗಿದ್ದಾನೆ. ಅವನು ಮೊದಲಿ ನಿಂದಲೂ ಹೀಗೆಯೇ ಅಂತೆ. ಸ್ವಲ್ಪವಾದರೂ ಒಳ್ಳೆಯ ನಡತೆಯಿಲ್ಲ."

"ಯಾರು ಏನೇ ಹೇಳಿದರೂ ನಾನು ನಂಬುವುದಿಲ್ಲ, ಸ್ವಾಮಿ. ಆಲಿವರ್ ಬಲು ಸಾಧು ಪ್ರಾಣಿ."

ಅದುವರೆಗೆ ಸುಮ್ಮನಿದ್ದ ಗ್ರಿಮ್‌ವಿಗ್ ಆಗ ಬಾಯಿಬಿಟ್ಟ. "ನಾನು ಮೊದಲಿನಿಂದಲೂ ಏನು ಹೇಳುತ್ತಿದ್ದೇನೆ? ಅದು ನಿಜವಾಯಿತು ಎಂಬು ದನ್ನು ಈಗಲಾದರೂ ನೋಡಿದಿರೋ ಇಲ್ಲವೊ? ಆಲಿವರ್ ಹಾಗಂತೆ, ಆಲಿವರ್ ಹೀಗಂತೆ! ಈಗ ಏನಾಯಿತು, ನೋಡಿದಿರೋ ಇಲ್ಲವೊ? ಅದಕ್ಕೇ ನಾನು ಹೇಳಿದ್ದು: ನನ್ನ ಮಾತು ಸುಳ್ಳಾದರೆ, ನನ್ನನ್ನು ಕೊಂದು ತಿಂಧಾಣೆ ಎಂಧು!" ಎಂಧ,

ಮುದುಕಿ ಸಿಡುಕಿನಿಂದ "ಆ ಹುಡುಗನೊಡನೆ ಎರಡು ದಿನ ಇರಲಿಲ್ಲ. ಎರಡು ಮಾತು ಆಡಲಿಲ್ಲ. ನಿಮಗೆ ಅವನ ಯೋಗ್ಯತೆ ಏನು ಗೊತ್ತು?" ಎಂದಳು.

ಆಗ ಬ್ರೌನ್ಲೊ ಅವಳನ್ನು ತಡೆದು, ಮನಸ್ಸಿಗೆ ದುಃಖವಾದರೂ ಕೋಪಗೊಂಡವನಂತೆ ನಟಿಸುತ್ತ, "ಸಾಕು, ಸಾಕು. ಇನ್ನು ಈ ಮನೆ ಯಲ್ಲಿ ಆ ಆಲಿವರನ ಹೆಸರನ್ನು ಯಾರೂ ಎತ್ತಬೇಡಿ. ಇನ್ನು ಅವನ ಸ್ಮರಣೆ ಕೂಡ ನಮಗೆ ಬೇಡ" ಎಂದು ಆಜ್ಞಾಪಿಸಿದಳು.

ಆ ಮನೆಯವರು ಅನುಭವಿಸುತ್ತಿದ್ದ ಮೂಕಸಂಕಟವನ್ನು ಕಂಡು, ಗ್ರಿಮ್‌ವಿಗ್ಗಿಗೂ 'ಅಯ್ಯೋ ಪಾಪ!' ಎನ್ನಿಸಿತು.

## ಆಲಿವರ್ ಕಂಡ ಮೊದಲ ಕಳ್ಳತನ

ಆಲಿವರ್ ಫ್ಯಾಗಿನ್ನಿನ ಗುಹೆ ಸೇರಿ ಸ್ವಲ್ಪ ಕಾಲ ಕಳೆಯಿತು. ಅನಂತರ ಒಂದು ದಿನ ಬಿಲ್ ಸೈಕ್ಸ್ ಯಾವುದೋ ಒಂದು ಮನೆಗೆ ಕನ್ನ ಹಾಕಬೇಕೆಂದು ನಿಶ್ಚಯಿಸಿದನು. ಅವನ ಸ್ನೇಹಿತ ಟೋಬಿ ಎಂಬುವನು 'ಕನ್ನ ಹಾಕುವುದಕ್ಕಿಂತ ಯಾವುದಾದರೂ ಕಿಟಕಿಯ ಮೂಲಕ ಒಬ್ಬ ಸಣ್ಣ ಹುಡುಗನನ್ನು ಇಳಿಬಿಟ್ಟು, ಅವನ ಕೈಯಿಂದ ಬಾಗಿಲು ತೆಗೆಸಿ, ಒಳಕ್ಕೆ ನುಗ್ಗುವುದು ಇನ್ನೂ ಸುಲಭ" ಎಂದು ಸಲಹೆ ಕೊಟ್ಟ. ಸೈಕ್ಸ್ ಅದನ್ನು ಅನುಮೋದಿಸಿ, ಫ್ಯಾಗಿನ್ನಿನ ಸಹಾಯವನ್ನು ಕೇಳಿದಾಗ, ಫ್ಯಾಗಿನ್ ಆಲಿವರನ್ನು ಸೈಕ್ಸಿನ ಜೊತೆಯಲ್ಲಿ ಕಳುಹಿಸಿ, ಅವನನ್ನು ಕಳ್ಳತನಕ್ಕೆ ತಳ್ಳಬೇಕೆಂದು ಮನಸ್ಸು ಮಾಡಿದನು.

ಒಂದು ದಿನ ಆಲಿವರ್ ಬೆಳಗ್ಗೆ ಎದ್ದು ಕಣ್ಣು ಬಿಟ್ಟಾಗ, ಅವನ ಹಾಸಿಗೆಯ ಪಕ್ಕದಲ್ಲಿ ಒಂದು ಜೊತೆ ಹೊಸ ಷೂ ಇತ್ತು. ಅದನ್ನು ನೋಡಿದೊಡನೆಯೆ ಆಲಿವರ್ "ನನ್ನ ಹಳೆಯ ಷೂಗಳನ್ನು ತೆಗೆದು ಹೊಸ

ಷೂ ಇಟ್ಟಿರುವುದು ನೋಡಿದರೆ, ನನಗೆ ಬಿಡುಗಡೆಯಾದರೂ ಆಗಬಹುದು" ಎಂದು ಸ್ವಲ್ಪ ಆಸೆ ತಂದುಕೊಂಡ.

ಮುಖ ತೊಳೆದುಕೊಂಡು, ಬೆಳಗಿನ ಉಪಾಹಾರ ತಿನ್ನುತ್ತಿದ್ದಾಗ ಫ್ಯಾಗಿನ್ "ಆಲಿವರ್, ಇನ್ನು ಸ್ವಲ್ಪಹೊತ್ತಿಗೆ ನೀನು ಸೈಕ್ಸ್ ಜೊತೆಯಲ್ಲಿ ಹೋಗಬೇಕು. ಬೇಗ ಸಿದ್ಧವಾಗು" ಎಂದ. ಅವನು ಮಾತನಾಡಿದ ಧ್ವನಿ ಕೇಳಿ ಆಲಿವರನ ಮುಖ ವಿವರ್ಣವಾಯಿತು,

ಫ್ಯಾಗಿನ್ ಅವನ ಭಯವನ್ನು ಗಮನಿಸಿ, "ಹೆದರಬೇಡ, ಆಲಿವರ್, ನಿನ್ನನ್ನು ಸೈಕ್ಸಿಗೆ ಒಪ್ಪಿಸಿಬಿಡುವುದಿಲ್ಲ. ನಿನ್ನಂತಹ ಮುದ್ದುಮಗುವನ್ನು ನಾವು ಹಾಗೆಲ್ಲ ಕಳೆದುಕೊಂಡೇವೆ? ಛೆಛೆ!" ಎಂದು ವಿಕಾರವಾಗಿ ನಕ್ಕು, ಕೈಯಲ್ಲಿದ್ದ ರೊಟ್ಟಿಯ ಚೂರಿಗೆ ಬೆಣ್ಣೆಯನ್ನು ಸವರುತ್ತ, "ಬಿಲ್ ಸೈಕ್ಸ್ ನಿನ್ನನ್ನು ಏಕೆ ಕರೆದುಕೊಂಡು ಹೋಗುತ್ತಾನೆ, ಗೊತ್ತೆ?" ಎಂದ. "ಏಕೆ ಇರಬಹುದು, ಹೇಳು, ನೋಡೋಣ" ಎಂದ. ತನಗೆ ತಿಳಿಯದೆಂದು ಆಲಿವರ್ ಹೇಳಲು, "ಹಾಗಾದರೆ, ಬಿಲ್ ಬರುವವರೆಗೂ ಸುಮ್ಮನಿರು. ತಿಳಿಯುತ್ತೆ" ಎಂದು ತಾನೂ ಸುಮ್ಮನಾದ.

ಆ ದಿನವೆಲ್ಲಾ ಹಾಗೇ ಕಳೆಯಿತು. ಸಂಜೆಯಾಯಿತು. ಫ್ಯಾಗಿನ್ ಒಂದು ಹಣತೆಯನ್ನು ಹಚ್ಚಿ, ಆಲಿವರನ ಮುಂದಿಟ್ಟು, ಅವನ ಕೈಗೆ ಒಂದು ಪುಸ್ತಕ ಕೊಟ್ಟು, "ಇಗೋ ಈ ಪುಸ್ತಕ ಓದುತ್ತಿರು, ಆಲಿವರ್. ಸೈಕ್ಸ್ ಎಷ್ಟು ಹೊತ್ತಿಗೆ ಬರುವನೋ ಏನೋ!" ಎಂದು ಹೇಳಿ, ತಾನು ಮಲಗುವುದಕ್ಕೆ ಹೊರಟ. ಹೊರಟಾಗ, ಬಾಗಿಲ ಹೊಸ್ತಿಲ ಮೇಲೆ ನಿಂತು, "ಒಂದು ಮಾತು, ಆಲಿವರ್. ಸೈಕ್ಸ್ ಏನು ಹೇಳಿದರೂ, ಅವನಿಗೆ ಎದುರಾಡಬೇಡ. ನಿನಗೆ ಬದುಕಬೇಕೆಂಬ ಆಸೆಯಿದ್ದರೆ, ಅವನು ಹೇಳಿದುದನ್ನು ಒಡನೆಯೇ ಮಾಡಿಬಿಡು" ಎಂದು ಒಂದು ರೀತಿಯಾಗಿ ಹೇಳಿದ.

ಅವನು ಹೇಳಿದ ಮಾತನ್ನೂ ಆಡಿದ ಧ್ವನಿಯನ್ನೂ ಕೇಳಿ, ಆಲಿ

ವರನ ಮೈ ಝುಮ್ಮೆಂದಿತು, ಮುಖದಲ್ಲಿ ಬೆವರು ನಿಂತಿತು. ಆಲಿವರ್ ನಡುನಡುಗುತ್ತ, ಫ್ಯಾಗಿನ್ ಮರೆಯಾದ ಮೇಲೆ, ಅವನು ಕೊಟ್ಟಿದ್ದ ಪುಸ್ತಕವನ್ನು ಬಿಚ್ಚಿ ಓದತೊಡಗಿದ. ಮೊದಮೊದಲು, ತಾನು ಏನು ಓದುತ್ತಿರುವೆನೆಂಬುದರ ಅರಿವೇ ಇಲ್ಲದೆ, ಸುಮ್ಮನೆ ಹಾಳೆಗಳನ್ನು ತಿರುವಿ ಹಾಕಿದ. ಬರುಬರುತ್ತ ಓದುತ್ತಿದ್ದುದು ಅರ್ಥವಾಗುತ್ತ ಬಂತು. ಆಲಿವರನ ನಡುಕ ಇನ್ನೂ ಹೆಚ್ಚಾಯಿತು. ಅವನು ಓದುತ್ತಿದ್ದ ಪುಸ್ತಕದ ತುಂಬ ಕಳ್ಳತನ, ದರೋಡೆ, ಕೊಲೆ ಮುಂತಾದ ಘೋರ ಕೃತ್ಯಗಳನ್ನು ಮಾಡಿದವರ ಕತೆಗಳು ತುಂಬಿದ್ದುವು.

ಆಲಿವರನ ಮೈ ಚಳಿ ಬಂದಂತೆ ಗಡಗಡ ನಡುಗಿತು. ಪುಸ್ತಕ ಅವನ ಕೈಯಿಂದ ಜಾರಿಬಿದ್ದಿತು. ಆಲಿವರ್ "ದೇವರೇ, ದೇವರೇ, ಇಂತಹ ದುರ್ವ್ಯಾಪಾರಗಳಿಗೆ ನಾನು ಸಿಕ್ಕಿಬೀಳದಂತೆ ನನ್ನನ್ನು ಕಾಪಾಡು!" ಎಂದು ಅನನ್ಯಮನಸ್ಕನಾಗಿ ಬೇಡಿಕೊಂಡ. ಸ್ವಲ್ಪವೇಳೆಯಲ್ಲಿಯೆ ಮನಸ್ಸು ಶಾಂತವಾಯಿತು. ಮೊದಲಿನ ಭೀತಿಯಿರಲಿಲ್ಲ. ಆದರೂ, ತನ್ನ ರಕ್ಷಣೆಗೆ ನಿಂತು, ತನ್ನನ್ನು ದುರ್ಮಾರ್ಗದಿಂದ ಕಾಪಾಡಬೇಕೆಂದು ದೇವರನ್ನು ಮತ್ತೆ ಮತ್ತೆ ಪ್ರಾರ್ಥಿಸಿದ.

ಆಲಿವರ್ ಇದ್ದ ಕೋಣೆಗೆ ಯಾರೋ ಬಂದ ಹಾಗಾಯಿತು, ಬಟ್ಟೆಯ ಶಬ್ದವಾಯಿತು.

"ಯಾರದು?" ಎಂದು ಆಲಿವರ್ ಬೆಚ್ಚಿ ಕೇಳಿದ.

"ನಾನು" ಎಂದು ಒಂದು ಕುಗ್ಗಿದ ಧ್ವನಿ ನಡುಗುತ್ತ ಉತ್ತರ ಕೊಟ್ಟಿತು.

ಆಲಿವರ್ ಹಣತೆಯನ್ನು ಎತ್ತಿ ಹಿಡಿದು ನೋಡಿದ. ಬಂದವಳು ನ್ಯಾನ್ಸಿ. ಅವಳ ಮುಖದಲ್ಲಿ ಕಾಂತಿಯೇ ಇರಲಿಲ್ಲ, ಕಾಯಿಲೆ ಮುಖ ಇದ್ದಹಾಗಿತ್ತು. ಬಂದವಳು ಆಲಿವರನ್ನು ಏನೂ ಮಾತನಾಡಿಸದೆ,

ಕುರ್ಚಿಯಲ್ಲಿ ಕುಕ್ಕುರಿಸಿಕೊಂಡು, ಕೈಕೈ ಹಿಸುಕಿಕೊಳ್ಳುತ್ತ, ಕಡೆಗೆ ಗದ್ಗದ ದಿಂದ "ಆಲಿವರ್, ಆಲಿವರ್!" ಎಂದು ಗೋಳಾಡಿದಳು.

"ಏಕೆ, ನ್ಯಾನ್ಸಿ? ಸ್ವಸ್ಥವಾಗಿಲ್ಲವೆ?" ಎಂದು ಆಲಿವರ್ ಕೇಳಿದ.

"ಅಯ್ಯೋ, ಹೀಗಾಗುವುದೆಂದು ತಿಳಿದಿದ್ದರೆ, ನಾನು ಈ ಅಕಾರ್ಯಕ್ಕೆ ಕೈಯೇ ಹಾಕುತ್ತಿರಲಿಲ್ಲ. ದೇವರೇ!" ಎಂದು ನ್ಯಾನ್ಸಿ ನೊಂದು ನುಡಿದಳು.

ಆಲಿವರ್ "ಏನಾಯಿತು? ಹೇಳು, ನ್ಯಾನ್ಸಿ. ನನ್ನಿಂದ ಏನಾದರೂ ಆಗಬಹುದಾದರೆ ಅಗತ್ಯವಾಗಿ ಮಾಡುತ್ತೇನೆ" ಎಂದು ಆಲಿವರ್ ಹೇಳಿದ.

ನ್ಯಾನ್ಸಿ ಕೈಗಳಿಂದ ಮುಖ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅತ್ತಳು. ತಾನು ಹೊದೆದಿದ್ದ ವಸ್ತ್ರವನ್ನು ಇನ್ನೂ ಬಿಗಿಯಾಗಿ ಹೊದೆದುಕೊಂಡು, ಚಳಿ ಬಂದವಳಂತೆ ನಡುಗಿದಳು. ಅವಳಿಗೆ ಚಳಿಯೋ ಏನೋ ಎಂದು ಆಲಿವರ್ ಬೆಂಕಿಯನ್ನು ಊದಿ ಕೆದಕಿದ. ನ್ಯಾನ್ಸಿ ತನ್ನ ಕುರ್ಚಿಯನ್ನು ಬೆಂಕಿಯ ಹತ್ತಿರಕ್ಕೆ ಎಳೆದು, ಸ್ವಲ್ಪ ಹೊತ್ತು ಮೈ ಕಾಯಿಸಿಕೊಂಡು, ನಡುಕ ನಿಂತ ಮೇಲೆ, ತಲೆಯೆತ್ತಿದಳು.

"ನನಗೆ ಒಂದೊಂದು ಸಲ ಏಕೋ ಹೀಗಾಗುತ್ತದೆ" ಎಂದು ನ್ಯಾನ್ಸಿ ತನ್ನ ಬಟ್ಟೆಬರೆಗಳನ್ನು ಸರಿಪಡಿಸಿಕೊಂಡು, "ಹೊರಡೋಣವೆ, ಆಲಿವರ್?" ಎಂದಳು.

"ನಾನು ನಿನ್ನ ಜೊತೆಯಲ್ಲಿ ಹೋಗಬೇಕೆ, ನ್ಯಾನ್ಸಿ?"

"ಹೌದು, ಆಲಿವರ್. ನಿನ್ನನ್ನು ಕರೆದುಕೊಂಡು ಬಾ ಎಂದು ಸೈಕ್ಸ್ ನನ್ನನ್ನು ಕಳಿಸಿದ್ದಾನೆ" ಎಂದು ನ್ಯಾನ್ಸಿ ಹೇಳುತ್ತಾ, ಆಲಿವರನ ಮುಖಭಾವ ಬದಲಾದುದನ್ನು ಕಂಡು, "ನೋಡು, ಮಗು. ನಿನಗೆ ಸಹಾಯ ಮಾಡುವುದು ಸಾಧ್ಯವಾಗಿದ್ದರೆ, ನಾನು ಅಗತ್ಯವಾಗಿ ಮಾಡುತ್ತಿದ್ದೆ. ಆದರೆ ಏನೇನೂ ಸಾಧ್ಯವಿಲ್ಲ. ನೋಡು, ಅವರು ಹೇಳಿದುದನ್ನು

ಮಾಡುವವರೆಗೂ ನಿನಗೇನೂ ಹಾನಿಯಿಲ್ಲ, ಅವರ ಬಲವಂತಕ್ಕಾಗಿ ಮಾಡುವದರಿಂದ ತಪ್ಪು ನಿನ್ನದಲ್ಲ." ಎಂದು ಹೇಳುತ್ತಿರುವಾಗಲೇ ಗಂಟಲು ಬಿಗಿದುಕೊಂಡು ಬಂದು, ಮುಂದೆ ಮಾತನಾಡಲಾರದೆ ಆಲಿವರನ ಕೈ ಹಿಡಿದುಕೊಂಡು, ದೀಪವನ್ನು ನಂದಿಸಿ, ಮನೆಬಿಟ್ಟು ಬೀದಿಗೆ ಬಂದಳು.

ಬೀದಿಯಲ್ಲಿ ಒಂದು ಕುದುರೆಗಾಡಿ ಸಿದ್ಧವಾಗಿ ನಿಂತಿತ್ತು. ನ್ಯಾನ್ಸಿ ಆಲಿವರನ್ನು ಒಳಗೆ ಕರೆದು ಕುಳ್ಳಿರಿಸಿಕೊಂಡು ಕಿಟಕಿಗಳಿಗೆ ಪರದೆ ಎಳೆದಳು. ಒಡನೆಯೇ ಗಾಡಿಯವನು ಎಲ್ಲಿಗೆ ಹೋಗಬೇಕೋ ಗೊತ್ತಿರುವವನಂತೆ, ಗಾಡಿಯನ್ನು ಓಡಿಸಿದನು. ಮುಂದೆ ಏನು ಮಾಡಬೇಕೆಂದು ಆಲಿವರ್ ಚಿಂತಿಸುತ್ತಿರುವಷ್ಟರಲ್ಲಿ ಗಾಡಿ ವೇಗದಿಂದ ಓಡಿ, ಓಡುತ್ತಿದ್ದಂತೆಯೇ ನಿಂತುಬಿಟ್ಟಿತು. ನ್ಯಾನ್ಸಿ ಗಾಡಿಯ ಕಿಟಕಿಗೆ ಮುಚ್ಚಿದ್ದ ಪರದೆಯನ್ನು ತೆಗೆದಳು. ಆಲಿವರ್ ದಾರಿಯಲ್ಲಿ ಆಚೆ ಈಚೆ ನೋಡಿದ. ಒಂದು ನರಪ್ರಾಣಿಯೂ ಇರಲಿಲ್ಲ. ಕೂಗಿಕೊಳ್ಳೋಣವೇ ಎಂದು ಅವನಿಗೆ ಮನಸ್ಸು ಬರುವುದರೊಳಗಾಗಿ ಅವನನ್ನು ಯಾರೋ ಒಂದು ಮನೆಯೊಳಕ್ಕೆ ಎಳೆದುಕೊಂಡು ಬಾಗಿಲು ಮುಚ್ಚಿದರು.

ಹೀಗೆ ಆಲಿವರ್ ಹೊಕ್ಕ ಮನೆ ಸೈಕ್ಸ್ ಇದ್ದ ಮನೆ. ಸೈಕ್ಸ್ ಆದರೂ ಆಲಿವರ್‌ಗಾಗಿಯೇ ನಿರೀಕ್ಷಿಸುತ್ತಿದ್ದ. ಅವನು ಬಂದೊಡನೆ ಮೂವರೂ ಊಟದ ಶಾಸ್ತ್ರ ಮಾಡಿದರು. ಸೈಕ್ಸ್ ಒಂದು ಹಾಸಿಗೆಯ ಮೇಲೆ ಕಾಲು ಚಾಚಿಕೊಂಡು, "ನ್ಯಾನ್ಸಿ, ಬೆಳಗಿನ ಜಾವ ಐದು ಗಂಟೆಗೆ ಎಬ್ಬಿಸಿಬಿಡು" ಎಂದು ಆಜ್ಞಾಪಿಸಿ, "ಆಲಿವರ್, ಅಲ್ಲಿ ಬಿದ್ದುಕೊ" ಎಂದು ಗದರಿದ.

ಆಲಿವರ್ ಅವನ ಆಜ್ಞೆಯಂತೆ ಒಂದು ಕಡೆ ಮುದುರಿಕೊಂಡ. ನ್ಯಾನ್ಸಿಯೂ ಅವನ ಆಜ್ಞೆಯಂತೆ ಅವರನ್ನು ಸಕಾಲದಲ್ಲಿ ಎಚ್ಚರಗೊಳಿಸುವುದಕ್ಕಾಗಿ ಬೆಂಕಿಯ ಮುಂದೆ ಹೊಲಿಯುತ್ತಾ ಕುಳಿತುಕೊಂಡಳು.

ಆಲಿವರ್‌ಗೆ ಬಹಳ ಹೊತ್ತು ನಿದ್ರೆಯೇ ಬರಲಿಲ್ಲ. "ನ್ಯಾನ್ಸಿ ಬಂದು ಏನಾದರೂ ಹೇಳಿಯಾಳೋ ಏನೋ. ಏನಾದರೂ ಉಪಾಯ ಮಾಡಿ ನನ್ನನ್ನು ಬಿಡಿಸುತ್ತಾಳೋ ಏನೋ" ಎಂದುಕೊಂಡು ಬಹು ಹೊತ್ತು ಅವಳ ಸಪ್ಪುಳವನ್ನೇ ಕಾದು ಮಲಗಿದ. ಆದರೆ ನ್ಯಾನ್ಸಿ ತನ್ನ ಚಿಂತೆಗಳಲ್ಲಿ ತಾನು ಮುಳುಗಿಹೋಗಿದ್ದಳು. ಆಲಿವರನಿಗೆ ಹಾಗೇ ಆಯಾಸದಿಂದ ನಿದ್ರೆ ಬಂತು.

ಬೆಳಗಿನ ಜಾವಕ್ಕೆ ನ್ಯಾನ್ಸಿ ಅವರಿಬ್ಬರನ್ನೂ ಎಬ್ಬಿಸಿದಳು. ಆಲಿವರ್ ಏಳುವ ವೇಳೆಗಾಗಲೇ ಸೈಕ್ಸ್ ಎದ್ದು, ತನ್ನ ನಿಲುವಂಗಿಯ ಜೇಬುಗಳಲ್ಲಿ ಏನೇನೋ ಪದಾರ್ಥಗಳನ್ನು ತುರುಕಿಕೊಳ್ಳುತ್ತಿದ್ದ. ನ್ಯಾನ್ಸಿ ರೊಟ್ಟಿ ಸುಟ್ಟು, ಕಾಫಿ ಕಾಯಿಸುತ್ತಿದ್ದಳು. ಇನ್ನೂ ಕತ್ತಲೆ ಕಳೆದಿರಲಿಲ್ಲ. ಹಣತೆ ಹಾಗೇ ಉರಿಯುತ್ತಿತ್ತು. ಮಳೆಯ ಹನಿ ಕಿಟಕಿಯ ಗಾಜಿನ ಮೇಲೆ ಬೀಳುತ್ತಿದ್ದ ಶಬ್ದ ಕೇಳಿಬರುತ್ತಿತ್ತು.

ಆಲಿವರ್ ಎದ್ದ. ಬೇಗ ಬೇಗ ಮುಖ ತೊಳೆದುಕೊಂಡ. ರೊಟ್ಟಿ ಕಾಫಿ ಆಯಿತು. ಸೈಕ್ಸ್ ಅವನನ್ನು ಅವಸರಪಡಿಸಿದ. ಆಲಿವರ್ ಸಿದ್ಧವಾಗಿಯೇ ಇದ್ದ. "ಮಳೆ, ಚಳಿ. ಕುತ್ತಿಗೆಗೆ ಸುತ್ತಿಕೊ" ಎಂದು ನ್ಯಾನ್ಸಿ ಆಲಿವರನ ಕಡೆಗೆ ಒಂದು ವಸ್ತ್ರ ಎಸೆದಳು. ಸೈಕ್ಸ್ ಅವನಿಗೊಂದು ಶಾಲು ಹೊದೆಸಿದ. ಅನಂತರ ಆಲಿವರನ ಕೈ ಹಿಡಿದುಕೊಂಡು ಹೊರಟಾಗ, ಸೈಕ್ಸ್ ಸೊಂಟದ ಹತ್ತಿರ ಸಿಕ್ಕಿಸಿಕೊಂಡಿದ್ದ ಪಿಸ್ತೂಲನ್ನು ಆಲಿವರ್ ನೋಡಿದ. ನಡುಗಿದ.

ನ್ಯಾನ್ಸಿಯನ್ನು ಹಿಂದೆ ಬಿಟ್ಟು, ಆಲಿವರ್ ಮತ್ತು ಸೈಕ್ಸ್ ಬೀದಿಗೆ ಬಂದರು. ರಾತ್ರಿಯೆಲ್ಲಾ ಮಳೆ ಬಿದ್ದ ದಾರಿಯುದ್ದಕ್ಕೂ ನೀರು ನಿಂತುಕೊಂಡಿತ್ತು. ಚಳಿಗಾಳಿ ಭರ್ರೋ ಎಂದು ಬೀಸುತ್ತಿತ್ತು. ಇಬ್ಬರೂ ಹಾಗೇ ನಡೆದರು. ದಾರಿಯ ದೀಪಗಳೆಲ್ಲ ಆರಿದವು. ಲಂಡನ್ನಿನ ಕಡೆಗೆ ಹೋಗುತ್ತಿದ್ದ ಕೆಲವು ಗಾಡಿಗಳು ಅವರನ್ನು ಎದುರುಗೊಂಡವು.

ದಾರಿಯಲ್ಲಿ ಒಂದು ಕಡೆ ಸಂತೆ. ಜನರ ಗುಂಪು ತುಂಬ. ಸೈಕ್ಸ್ ಆಲಿವರನ್ನೂ ಎಳೆದುಕೊಂಡು, ಅವರ ನಡುವೆ ದಾರಿ ಬಿಡಿಸಿಕೊಂಡು, ಮುಂದೆ ಹೋದ. ಆಲಿವರ್ ಸೈಕ್ಸಿನ ಜೊತೆಯಲ್ಲಿ ಹೆಜ್ಜೆ ಹಾಕಲಾರದೆ ಓಡಿಬರುತ್ತಿದ್ದ.

ಸ್ವಲ್ಪ ದೂರ ಹೋಗುವುದರೊಳಗಾಗಿ ಟೋಬಿಯ ಊರಿನ ಕಡೆಗೆ ಹೋಗುತ್ತಿದ್ದ ಒಂದು ಗಾಡಿ ಸಿಕ್ಕಿತು. ಗಾಡಿಯವನು ಹುಡುಗನ ಪಾಡು ನೋಡಿ, "ಬನ್ನಿ, ಗಾಡಿಯಲ್ಲಿ ಹತ್ತಿ. ಇದು ಯಾರು ? ನಿನ್ನ ಹುಡುಗನೊ ?" ಎಂದು ಕರೆದ.

"ಹೌದು ಹೌದು. ನನ್ನ ಹುಡುಗನೇ" ಎಂದು ಸೈಕ್ ಆಲಿವರನ ಕಡೆ ನೋಡುತ್ತಾ ತನ್ನ ಪಿಸ್ತೂಲನ್ನು ಕೈಯಿಂದ ತಟ್ಟಿ, "ಹತ್ತು, ಹತ್ತು" ಎಂದ.

ಆಲಿವರ್ ಹತ್ತಿದ. ಅವನ ಹಿಂದೆ ಸೈಕ್ಸೂ ಹತ್ತಿದ. ಗಾಡಿ ಮುಂದೆ ಹೋಯಿತು. ಒಂದು ಹಳ್ಳಿ ಕಳೆಯಿತು, ಎರಡು ಕಳೆಯಿತು, ಮೂರು ಕಳೆಯಿತು. ಮುಂದೆ ಒಂದು ಕಡೆ ದಾರಿ ಕವಲು ಒಡೆಯಿತು.

ಸೈಕ್ಸ್ ಗಾಡಿಯನ್ನು ನಿಲ್ಲಿಸಿದ. ಆಲಿವರನ್ನು ಇಳಿಸಿಕೊಂಡ. ಆಲಿವರನ ಕಡೆ ನೋಡುತ್ತ ಪುನಃ ಪಿಸ್ತೂಲಿನ ಮೇಲೆ ಕೈಯಿಂದ ತಟ್ಟಿದ. "ನಾವು ಹೀಗೇ ಈ ಕಡೆ ಹೋಗುತ್ತೇವೆ" ಎಂದು ಗಾಡಿಯವನನ್ನು ಕಳುಹಿಸಿಕೊಟ್ಟು, ತಾನು ಒಂದು ಕವಲನ್ನು ಹಿಡಿದು ಹೊರಟು, ಸ್ವಲ್ಪ ಹೊತ್ತಿನಲ್ಲೆ ಟೋಬಿಯ ಮನೆಗೆ ಬಂದ.

ಆಲಿವರ್‌ಗೂ ಸೈಕ್ಸಿಗೂ ಟೋಬಿಯ ಮನೆಯಲ್ಲಿ ಊಟವಾಯಿತು. ಆಲಿವರ್ ಆಯಾಸದಿಂದಲೂ ಚಳಿಯಿಂದಲೂ ಹೆದರಿಕೆಯಿಂದಲೂ ನಡುಗುತ್ತ, ಬೆಂಕಿಯ ಮುಂದೆ ಕುಳಿತು ತೂಕಡಿಸಿದ. ಟೋಬಿಯೂ ಸೈಕ್ಸನೂ ಅಲ್ಲೇ ಎರಡು ಕುರ್ಚಿಗಳ ಮೇಲೆ ಒರಗಿಕೊಂಡು, ಸ್ವಲ್ಪ ಕಣ್ಣು ಮುಚ್ಚಿದ.

ರಾತ್ರಿ ಸುಮಾರು ಒಂದು ಗಂಟೆಯಾಗಿರಬಹುದು. ಕಳ್ಳರಿಬ್ಬರೂ ಎದ್ದರು. ಆಲಿವರನ್ನು ಎಬ್ಬಿಸಿದರು. ಪಿಸ್ತೂಲುಗಳನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು, ಬೀಗದಕೈ ಗೊಂಚಲು, ದೀಪ ಮುಂತಾದ ಉಪಕರಣ ಗಳನ್ನು ಸಂಗ್ರಹಿಸಿಕೊಂಡು ಹೊರಟರು. ಆಲಿವರ್ ವಿಧಿಯಿಲ್ಲದೆ ಅವರ ನಡುವೆ ಹೋಗಲೇಬೇಕಾಯಿತು.

ಹೀಗೆ ಸ್ವಲ್ಪ ದೂರ ನಡೆದ ಮೇಲೆ, ಯಾವುದೋ ಮನೆಯ ಹೊರ ಆವರಣದ ಗೋಡೆ ಸಿಕ್ಕಿತು. ಟೋಬಿ ಛಂಗನೆ ಹಾರಿ ಆ ಗೋಡೆಯನ್ನು ಏರಿ ಕುಳಿತ. ಸೈಕ್ಸ್ ಆಲಿವರನ್ನು ಹಿಡಿದೆತ್ತಿದ. ಟೋಬಿ ಅವನನ್ನು ಹಿಡಿದುಕೊಂಡು ಗೋಡೆಯಿಂದಾಚೆ ನೆಲದ ಮೇಲೆ ಇಳಿಸಿ, ಅವನ ಹಿಂದೆಯೇ ತಾನೂ ದುಮುಕಿದ. ಆಲಿವರ್ ಚೇತರಿಸಿಕೊಳ್ಳುವುದ ರೊಳಗಾಗಿ ಸೈಕ್ಸ್ ಒಂದೇ ಹಾರಿಗೆ ಗೋಡೆಯನ್ನು ದಾಟಿ, ಆಲಿವರನ ಒಂದು ತೋಳನ್ನು ಹಿಡಿದ. ಟೋಬಿ ಅವನ ಇನ್ನೊಂದು ತೋಳನ್ನು ಹಿಡಿದುಕೊಂಡ.

ಈ ವೇಳೆಗೆ ಆಲಿವರನಿಗೆ ತಾವು ಬಂದಿರುವುದು ಕಳ್ಳತನಕ್ಕೆಂದು ತಿಳಿದುಹೋಯಿತು. ಅವನು ಕೂಡಲೆ ಆ ಕಳ್ಳರಿಬ್ಬರ ಕಾಲು ಹಿಡಿದು ಕೊಂಡು, "ನಿಮ್ಮ ದಮ್ಮಯ್ಯ. ನನ್ನನ್ನು ಬಿಟ್ಟುಬಿಡಿ. ನಾನು ಪುನಃ ಊರಿಗೆ ಬರುವುದಿಲ್ಲ. ಎಲ್ಲಿಯಾದರೂ ಮರೆಯಾಗಿ ಹೋಗುತ್ತೇನೆ. ನಿಮ್ಮ ದಮ್ಮಯ್ಯ. ನನ್ನನ್ನು ಬಿಡಿ" ಎಂದು ನಡುಗುತ್ತ, ತೊದಲುತ್ತ, ಬೇಡಿಕೊಂಡ.

ಸೈಕ್ಸ್ ಮಹಾ ರೋಷಗೊಂಡು, "ಏಳುತ್ತೀಯೋ ಇಲ್ಲವೋ" ಎಂದುಪಿಸ್ತೂಲನ್ನು ಕೈಗೆಳೆದುಕೊಂಡ. ಟೋಬಿ ಅವನ ಕೈಯನ್ನು ತಡೆದು, ಹುಡುಗನ ಬಾಯನ್ನು ಮುಚ್ಚಿ, "ಏನಿದು ಬಿಲ್, ಮನೆಯವರನ್ನು ಎಚ್ಚರಗೊಳಿಸುತ್ತೀಯೇನು?" ಎಂದು ಸೈಕ್ಸನ್ನು ಗದರಿಸಿ, "ನೋಡು! ಉಸಿರೆತ್ತಿದರೆ ನಿನ್ನ ಕುತ್ತಿಗೆ ಮುರಿದುಬಿಡುತ್ತೇನೆ" ಎಂದು ಆಲಿವರನ್ನು

ಹೆದರಿಸಿ, ಆ ಮನೆಯ ಕಿಟಕಿಯ ಹತ್ತಿರ ಬಂದ. "ಬಿಲ್, ಇವನನ್ನು ನಾನು ಹಿಡಿದುಕೊಂಡಿರುತ್ತೇನೆ. ನೀನು ಆ ಕಿಟಕಿ ತೆಗೆ" ಎಂದ.

ಮುಚ್ಚಿದ ಆ ಕಿಟಕಿಯನ್ನು ಸೈಕ್ಸ್ ಒಂದು ಕಬ್ಬಿಣದ ಸಲಾಕಿಯಿಂದ ಮೀಟಿ, ಸದ್ದಿಲ್ಲದಂತೆ ತೆರೆದ. ಆಲಿವರನ ದೇಹ ಹಿಡಿಸುವಷ್ಟು ಅವಕಾಶ ವಾಯಿತು. ಟೋಬಿಯೂ ಸೈಕ್ಸೂ ಸೇರಿ, ಆಲಿವರನ್ನು ಹಿಡಿದೆತ್ತಿದರು. ತಂದಿದ್ದ ಲಾಂದ್ರವನ್ನು ಹಚ್ಚಿ ಆಲಿವರನ ಮುಖಕ್ಕೆ ಹಿಡಿದು, "ನೋಡು. ಆ ಕಿಟಕಿಯಿಂದ ನಿನ್ನನ್ನು ಒಳಕ್ಕೆ ಇಳಿಸುತ್ತೇವೆ. ಈ ದೀಪ ತೆಗೆದುಕೊ. ಜೋಪಾನವಾಗಿ, ಸದ್ದುಮಾಡದೆ ಹೋಗಿ, ಅಂಗಳವನ್ನು ದಾಟಿ, ಬೀದಿಯ ಬಾಗಿಲು ತೆಗೆ. ಮೇಲುಗಡೆಯ ಅಗುಳಿ ಕೈಗೆ ಎಟುಕದೆ ಹೋದರೆ, ಯಾವುದಾದರೂ ಕುರ್ಚಿಯ ಮೇಲೆ ನಿಂತುಕೊ" ಎಂದು ಅವನನ್ನು ಆ ಕಿಟಕಿಯ ಮೂಲಕವಾಗಿ ಆ ಮನೆಯೊಳಕ್ಕೆ ಇಳಿಸಿದರು.

"ಈ ದೀಪ ತೆಗೆದುಕೊ" ಎಂದು ಸೈಕ್ಸ್ ಆಲಿವರನ ಕೈಗೆ ದೀಪ ಕೊಡುವುದಕ್ಕಾಗಿ ಕಿಟಕಿಯಲ್ಲಿ ತಲೆಯಿಟ್ಟವನು ಮನೆಯೊಳಗೆ ಏನೋ ಶಬ್ದವಾದುದನ್ನು ಕೇಳಿ ಬೆಚ್ಚಿ, "ಹಾ! ಏನದು?" ಎಂದ.

"ಏನದು?" ಎಂದು ಟೋಬಿ ತಾನೂ ಬೆಚ್ಚಿ ಕೇಳಿದ.

ಓಡಿಹೋಗಿ ಮನೆಯವರನ್ನು ಎಬ್ಬಿಸಿಬಿಡಲೇ ಎಂದು ಆಲಿವರ್ ಅರ್ಧ ಕ್ಷಣ ಆಲೋಚಿಸಿದ. ಅಷ್ಟರಲ್ಲಿ ಸೈಕ್ಸ್ ಮತ್ತು ಟೋಬಿ ಮನೆಯೊಳಗೆ ಏನೋ ಶಬ್ದವಾದುದನ್ನು ಕೇಳಿದವರು "ಬಾ! ಬಾ!" ಎಂದು ಆಲಿವರನ್ನು ಗಟ್ಟಿಯಾಗಿಯೇ ಕರೆದರು. ಅವರ ಕೂಗಿಗೆ ಆಲಿವರ್ ಬೆಚ್ಚಿದ. ಅದೇ ಗಳಿಗೆಯಲ್ಲಿ ಒಂದು ಬಾಗಿಲು ತೆರೆಯಿತು. ಯಾರೋ ಮೂರು ನಾಲ್ಕು ಜನ ಬಂದ ಹಾಗಾಯಿತು. ಏನೋ ಬೆಂಕಿ– ಏನೋ ಸದ್ದು– ಏನೋ ಹೊಗೆ– ಆಲಿವರನ್ನು ಏನೋ ಹಿಂದಕ್ಕೆ ಒದ್ದಹಾಗಾಯಿತು. ಹಿಂದಕ್ಕೆ ಗೋಡೆಗೆ ಬಂದು ಬಿದ್ದ ಆಲಿವರನ ಕತ್ತಿನಪಟ್ಟಿಯನ್ನು ಸೈಕ್ಸ್ ಎಡಗೈಯಿಂದ ಹಿಡಿದು, ಬಲಗೈಯ ಪಿಸ್ತೂಲಿನಿಂದ ಗುಂಡು ಹಾರಿಸಿದ.

ಬಾಗಿಲು ತೆರೆದುಕೊಂಡು ಬಂದ ಮನೆಯುವರು ಹಿಮ್ಮೆಟ್ಟಿದರು. ಆಲಿವರನ್ನು ಸೈಕ್ಸ್ ಕಿಟಕಿಯಿಂದ ಈಚೆಗೆ ಎಳೆದುಕೊಂಡ.



"ಬಾಗಿಲು ತೆರೆಯಿತು"

"ಟೋಬಿ! ಆ ಶಾಲು ಕೊಡು. ಹುಡುಗನಿಗೆ ಗುಂಡು ತಾಕಿದೆ."

ಎಂದು ಸೈಕ್ಸ್ ಬಟ್ಟೆ ತೆಗೆದುಕೊಂಡು, ಆಲಿವರನ ಗಾಯಗಳನ್ನು ಕಟ್ಟಿದ. ಆಲಿವರ್ ನೋವಿನಿಂದ ಮೂರ್ಛೆ ಹೋದ.

ಆ ವೇಳೆಗೆ ಮನೆಯ ಆಳುಮಕ್ಕಳೆಲ್ಲ ಎದ್ದು, ದೀಪಗಳನ್ನೂ ದೊಣ್ಣೆಗಳನ್ನೂ ಬಂದೂಕಗಳನ್ನೂ ಹಿಡಿದುಕೊಂಡು ಕಳ್ಳರನ್ನು ಅಟ್ಟಿಸಿಕೊಂಡು ಬಂದರು. ಅವರ ದೀಪದ ಬೆಳಕನ್ನು ಕಂಡೊಡನೆಯೇ ಟೋಬಿ ಕಾಲಿಗೆ ಬುದ್ಧಿ ಹೇಳಿದ. ಗಾಯಗೊಂಡ ಹುಡುಗನನ್ನು ಸೈಕ್ಸ್ ಒಬ್ಬನೇ ಸುರಕ್ಷಿತವಾಗಿ ಸಾಗಿಸುವಂತಿರಲಿಲ್ಲ. ಆದ್ದರಿಂದ ಟೋಬಿಯ ಸಹಾಯ ಬೇಕಾಗಿತ್ತು. ಆದರೆ ಟೋಬಿ ಆಗಲೇ ಕಾಣೆಯಾಗುವುದರಲ್ಲಿದ್ದ. ಆದರೆ ಮರೆಯಾಗುವ ಮುಂಚೆ "ಸೈಕ್ಸ್, ಅವನನ್ನು ಕಟ್ಟಿಕೊಂಡರೆ ನಾವು ಉಳಿಯುವ ಹಾಗಿಲ್ಲ. ಅವನನ್ನು ಬಿಟ್ಟು ನೀನು ತಲೆ ತಪ್ಪಿಸಿಕೊ" ಎಂದವನೇ ಅಲ್ಲಿ ನಿಲ್ಲದೆ ಓಡಿಹೋದ.

ಸೈಕ್ಸ್ ನೋಡಿದ. ಟೋಬಿ ಹೇಳಿದ ಹಾಗೆಯೇ ಆಲಿವರನ್ನೂ ಎತ್ತಿಕೊಂಡು ಪಾರಾಗುವುದು ಸಾಧ್ಯವಿರಲಿಲ್ಲ. ಆದಕಾರಣ, ಆಲಿವರನ್ನು ಪಕ್ಕದ ಒಂದು ಬೇಲಿಯ ಮರೆಯಲ್ಲಿ ಮಲಗಿಸಿ, ತಾನು ಅದರ ಎದುರು ದಿಕ್ಕಿನಲ್ಲಿ ಓಡುತ್ತಾ, ಎಲ್ಲರೂ ಹುಡುಗನ ಕಡೆ ತಿರುಗದೆ ತನ್ನ ಬೆನ್ನಟ್ಟಿ ಬರಲೆಂದು ಒಂದು ಸಲ ಪಿಸ್ತೂಲನ್ನು ಗಾಳಿಯಲ್ಲಿ ಹಾರಿಸಿ, ಮರೆಯಾದನು.

ಅಟ್ಟಿಕೊಂಡು ಬರುತ್ತಿದ್ದವರು ಯಾರಿಗೂ ಆ ಬೇಟೆಯಲ್ಲಿ ಅಷ್ಟು ಉತ್ಸಾಹವಿರಲಿಲ್ಲ. ರಾತ್ರೆ, ನಿದ್ರೆಯ ಹೊತ್ತು, ಚಳಿ, ಜೊತೆಗೆ ಪ್ರಾಣಭಯ ಬೇರೆ. ನಡುಗುತ್ತಲೇ ಒಬ್ಬರಿಗೊಬ್ಬರು "ಹೇಗೂ ಕಳ್ಳರನ್ನು ಮನೆಯಿಂದ ಓಡಿಸಿದ್ದೇವೆ. ಸಾಕು, ಹೋಗೋಣ" ಎಂದು ಪಿಸುಪಿಸು ಮಾತಾಡಿಕೊಂಡರು. ಹಿಂದಿರುಗುವುದೇ ವಿವೇಕವೆಂದು ಎಲ್ಲರೂ ಒಪ್ಪಿದರು. ನಾಯಿಗಳನ್ನೆಲ್ಲ ಹಿಂದಕ್ಕೆ ಕರೆದರು. ಅವುಗಳಾದರೂ ಸದ್ಯಃ ಕರೆದರೆ ಸಾಕೆಂದು ಕಾದಿದ್ದುವು.

ಕಳ್ಳರನ್ನು ಅಟ್ಟಿಬಂದಿದ್ದವರ ಸಂಖ್ಯೆಯೇನೂ ದೊಡ್ಡದಾಗಿರಲಿಲ್ಲ. ಅವರು ಇದ್ದವರು ಮೂವರೇ ಮೂವರು. ಒಬ್ಬ ಬೊಜ್ಜ, ಅಡುಗೆಯ ಕೆಲಸದವನು, ಇನ್ನೊಬ್ಬ ಕುಳ್ಳ, ತೋಟದ ಕೆಲಸ ಮಾಡುತ್ತಿದ್ದವನು; ಮೂರನೆಯವನು ಸಣಕಲ ಹುಡುಗ, ಅದೂ ಇದೂ ಕೆಲಸ ಮಾಡುವವನು. ಅವರಿಗೆ ಮನೆಯ ಮುಖ ಕಂಡರೆ ಸಾಕೆನ್ನಿಸಿತ್ತು. ಮೂವರೂ ಏನೂ ಸಂಕೋಚಪಡದೆ ಮನೆಯ ಕಡೆಗೆ ಓಡಿದರು.

## ಆಲಿವರನ ಹೊಸ ಮಿತ್ರರು

ರಾತ್ರಿ ಕಳೆಯುತ್ತ ಬಂದ ಹಾಗೆಲ್ಲ ಚಳಿ ಹೆಚ್ಚುತ್ತ ಬಂತು. ಹಿಮ ಹೆಚ್ಚು ಬಿದ್ದು ಹುಲ್ಲೆಲ್ಲ ಒದ್ದೆಯಾಯಿತು. ನೆಲವೆಲ್ಲ ಕೆಸರಾಯಿತು.

ಬೆಳಗಾಗುತ್ತ ಬಂತು. ಗಾಳಿ ಬೀಸಿದರೆ ಚಾವಟಿಯಿಂದ ಹೊಡೆದ ಹಾಗಿತ್ತು. ಸೋನೆ ಹನಿ ಹಿಡಿಯಿತು, ಬೇಲಿಯ ಎಲೆಗಳ ಮೇಲೆ ಪಟಪಟ ಬಿತ್ತು.

ಆಲಿವರ್ ಬಹು ಹೊತ್ತು ಸೈಕ್ಸ್ ತನ್ನನ್ನು ಬಿಟ್ಟು ಹೋದ ಕಡೆಯಲ್ಲಿಯೇ ಮೈಮೇಲೆ ಎಚ್ಚರವಿಲ್ಲದೆ ಬಿದ್ದಿದ್ದ. ಬೆಳಗಾಗುವ ವೇಳೆಗೆ ಸ್ವಲ್ಪ ನರಳುವ ಶಬ್ದ ಕೇಳಿಬಂತು. ಎಡದ ತೋಳು ಗಾಯವಾಗಿ, ಅದಕ್ಕೆ ಸುತ್ತಿದ್ದ ಶಾಲು ರಕ್ತದಿಂದ ಹೆಪ್ಪುಗಟ್ಟಿತ್ತು. ಆಲಿವರ್ ನೋವಿನಿಂದ ನರಳುತ್ತ, ಹಾಗೇ ಕಷ್ಟಪಟ್ಟು ಎದ್ದು ಕುಳಿತ. ಹಾಗೇ ನೋವನ್ನು ಸಹಿಸಿಕೊಂಡು ಮೆಲ್ಲನೆ ಎದ್ದು, ಬೇಲಿಯನ್ನು ಒರಗಿಕೊಂಡು ನಿಂತ. ಸ್ವಲ್ಪ ಹೊತ್ತು ಹಾಗೇ ನಿಂತು, ಚೇತರಿಸಿಕೊಂಡು, ಎಲ್ಲಿಗೆ ಹೋಗುವೆನೆಂಬುದು ತಿಳಿಯದೆ, ಕಾಲು ಎಳೆದ ಕಡೆಗೆ ನಡೆದ.

ಸ್ವಲ್ಪ ಹಾಗೇ ತೂರಾಡಿಕೊಂಡು ಮುಂದುವರಿದ ಮೇಲೆ ಒಂದು ದಾರಿ ಸಿಕ್ಕಿತು. ಆಲಿವರ್ ಕಣ್ಣುಬಿಟ್ಟು ಸುತ್ತಲೂ ನೋಡಿದ. ಸಮೀಪದಲ್ಲಿ ಒಂದು ಮನೆ ಕಾಣಿಸಿತು. "ಈ ಮನೆಯನ್ನು ಮುಟ್ಟಿದರೆ, ಅಲ್ಲಿ

ನವರು ಕರುಣೆಯಿಂದ ನನ್ನನ್ನು ಕಾಪಾಡಿಯಾರು. ಒಂಟಿಯಾಗಿ ಹೊಲ ಗದ್ದೆಗಳ ನಡುವೆ ಸಾಯುವುದಕ್ಕಿಂತ ಜನರ ನಡುವೆ ಸಾಯುವುದೇ ಮೇಲು" ಎಂದು ಅವನಿಗೆ ಎನ್ನಿಸಿತು. ಹಾಗೇ ಸಾಹಸಮಾಡಿ ಆ ಮನೆಯ ಕಡೆಗೆ ತಿರುಗಿ ನಡೆದ.

ಆ ಮನೆಯ ಹತ್ತಿರ ಬಂದ ಹಾಗೆಲ್ಲಾ, 'ಇದನ್ನು ಎಲ್ಲಿಯೋ ಈ ಮೊದಲು ನೋಡಿದ್ದೇನೆ' ಎನ್ನಿಸುತ್ತಿತ್ತು. ಹಾಗೇ ನೋಡುತ್ತ ನೋಡುತ್ತ ಮನೆಯ ಹೊರ ಆವರಣದ ಗೋಡೆಯನ್ನು ಕಂಡೊಡನೆಯೇ "ನಿನ್ನೆ ರಾತ್ರಿ ನಾವು ಹಾರಿದ ಗೋಡೆ ಇದೇ! ಇದೇ ಮನೆಗೆ ನಾವು ನೆನ್ನೆ ಕನ್ನ ಹಾಕಿದ್ದು!" ಎಂದು ಅವನಿಗೆ ಸ್ಪಷ್ಟವಾಯಿತು.

ಒಡನೆಯೆ ಕೈಕಾಲು ನಡುಗಲಾರಂಭವಾಯಿತು. ಓಡಿಹೋಗಿಬಿಡ ಬೇಕೆಂದು ಮನಸ್ಸಾಯಿತು. ಆದರೆ ಓಡುವುದಕ್ಕೆ ತ್ರಾಣವೆಲ್ಲಿಂದ ಬಂತು! ನಿಲ್ಲಲಾರದವನು, ನಡೆಯಲಾರದವನು, ಓಡುವುದು ಹೇಗೆ? ಏನಾದರೂ ಆಗಲಿ ಎಂದು ಆಲಿವರ್ ತತ್ತರಿಸುತ್ತ ಹುಲ್ಲುಗಾವಲನ್ನು ದಾಟಿ, ಮನೆಯ ಮೆಟ್ಟಲುಗಳನ್ನು ಹತ್ತಿ, ಬಾಗಿಲ ಚಿಲಕವನ್ನು ಹಿಡಿದು ಅಲ್ಲಾಡಿಸಿದ. ಅಷ್ಟು ಶ್ರಮವೇ ಅವನಿಗೆ ಅತಿಯಾಗಿ, ಹಾಗೇ ನಿಶ್ಶಕ್ತಿಯಿಂದ ಕುಸಿದು, ಪಕ್ಕದಲ್ಲಿದ್ದ ಕಂಬಕ್ಕೆ ಒರಗಿಕೊಂಡ.

ಇತ್ತ ಆಲಿವರ್ ಬಾಗಿಲ ಚಿಲಕವನ್ನು ಹಿಡಿದು ಅಲುಗಿಸಿದಾಗ, ಒಳಗೆ ಅಡುಗೆಯ ಮನೆಯಲ್ಲಿ ಅಡುಗೆಯವನೂ ತೋಟದವನೂ ಮನೆ ಕೆಲಸದ ಹುಡುಗನೂ ಕುಳಿತುಕೊಂಡು ಕಾಪಿ ಕುಡಿಯುತ್ತಿದ್ದರು. ಚಿಲಕದ ಶಬ್ದ ಕೇಳಿದೊಡನೆ ಬೆಚ್ಚಿ, ಕುಡಿಯುತ್ತಿದ್ದ ಕಾಪಿಯನ್ನು ಮೈಮೇಲೆ ಚೆಲ್ಲಿ ಕೊಂಡರು.

"ಏನದು?" ಎಂದು ಅಡುಗೆಯವನು ಕೂಗಿಕೊಂಡು, "ಯಾರೋ ಬಾಗಿಲು ಶಬ್ದಮಾಡಿದ ಹಾಗಾಯಿತು. ಯಾರಾದರೂ ತೆಗೆಯಿರಿ" ಎಂದ.

ಯಾರೂ ಅಲ್ಲಾಡಲಿಲ್ಲ. ಒಬ್ಬರ ಮುಖ ಒಬ್ಬರು ನೋಡಿದರು. ಕಡೆಗೆ ಅಡುಗೆಯವನು "ಬನ್ನಿ. ಹೆದರಿಕೆ ಏನು? ಮೂವರೂ ಒಟ್ಟಿಗೆ ಹೋಗೋಣ. ಆ ಮುಸುರೆ ತೊಳೆಯುವವಳನ್ನೂ ಗುಡಿಸುವವಳನ್ನೂ



"ಕಳ್ಳ ಸಿಕ್ಕಿಬಿದ್ದ"

ಕರೆ, ಜೊತೆಗಿರಲಿ. ದೀಪವನ್ನೂ ತೆಗೆದುಕೊಳ್ಳಿ" ಎಂದು ನಡುಗುತ್ತಲೇ ಎದ್ದನು.

ಎಲ್ಲರೂ ಒಟ್ಟಿಗೆ ಮಹಾ ಧೈರ್ಯಸ್ಥರಂತೆ ಗಟ್ಟಿಯಾಗಿ ಮಾತನಾಡಿಕೊಳ್ಳುತ್ತ, ಒಬ್ಬರಿಗಿಂತ ಒಬ್ಬರು ಹಿಂದೆ ನಿಲ್ಲುತ್ತ ಬಂದು ಬಾಗಿಲು ತೆಗೆದು ನೋಡಿದರೆ, ಆಲಿವರ್ ಕಂಬವನ್ನು ಒರಗಿಕೊಂಡು ಕುಸಿದಿದ್ದುದು ಕಾಣಬಂತು. ಒಡನೆಯೆ ಅಡುಗೆಯವನು, ಅದುವರೆಗೆ ಎಲ್ಲರಿಗಿಂತ ಹಿಂದೆ ನಿಂತಿದ್ದವನು, ಮುಂದೆ ಬಂದು, ಆಲಿವರನ ಬಲ ರೆಟ್ಟೆಯನ್ನು ಬಲವಾಗಿ ಹಿಡಿದು, ದರದರನೆ ಮನೆಯೊಳಕ್ಕೆ ಎಳೆದುಕೊಂಡು ಬಂದು, "ಕಳ್ಳ ಸಿಕ್ಕಿದ! ಕಳ್ಳ ಸಿಕ್ಕಿದ!" ಎಂದು ಗಟ್ಟಿಯಾಗಿ ಕೂಗಿಕೊಂಡ.

ಆ ಮನೆಯಲ್ಲಿದ್ದವರು ಇಬ್ಬರು ಹೆಂಗಸರು ಮಾತ್ರ – ರೋಸ್ ಎಂಬಾಕೆ, ಮತ್ತು ಅವಳ ದೊಡ್ಡಮ್ಮ ಮಿಸೆಸ್ ಮೆಯ್ಲಿ ಎಂಬಾಕೆ. ರೋಸ್ ಹುಡುಗಿ, ಮಿಸೆಸ್ ಮೆಯ್ಲಿ ಮುದುಕಿ.

ಅಡುಗೆಯವನ ಕೂಗಾಟವನ್ನು ಕೇಳಿ, ಮಹಡಿಯ ಮೇಲಿನ ಒಂದು ಕೊಟಡಿಯ ಬಾಗಿಲನ್ನು ತೆರೆದು ರೋಸ್ ಹೊರಗೆ ತಲೆ ಹಾಕಿ, ಮೆಲ್ಲನೆ "ಕೂಗಬೇಡ. ದೊಡ್ಡಮ್ಮನಿಗೆ ತೊಂದರೆಯಾಗುತ್ತೆ. ಕಳ್ಳ ಸಿಕ್ಕಿದನೇನು? ಯಾರಿಗಾದರೂ ಗಾಯವಾಯಿತೇನು?" ಎಂದಳು.

ಅಡುಗೆಯವನು ಧ್ವನಿಯನ್ನು ತಗ್ಗಿಸಿ, "ನಮಗೆ ಯಾರಿಗೂ ಏನೂ ಗಾಯವಾಗಿಲ್ಲ" ಎಂದನು.

"ಕಳ್ಳನಿಗೆ ಏನಾದರೂ ಗಾಯವಾಗಿದೆಯೇನು?"

"ಆಗಿದೆ. ಇದೋ, ಪುನಃ ಮೂರ್ಛೆ ಹೋದ" ಎಂದು ಅಡುಗೆಯವನು ಕೂಗಿದ.

"ಒಂದು ನಿಮಿಷ ತಾಳು" ಎಂದು ರೋಸ್ ತನ್ನ ದೊಡ್ಡಮ್ಮನ ಹತ್ತಿರ ಹೋಗಿ ಬಂದು, "ಅವನನ್ನು ನಿನ್ನ ಕೊಟಡಿಯಲ್ಲಿ, ನಿನ್ನ ಹಾಸಿಗೆಯಲ್ಲೆ ಮಲಗಿಸಿ, ಬೆಚ್ಚಗೆ ಹೊದಿಸಬೇಕಂತೆ. ಬೇಗನೆ ಓಡಿಹೋಗಿ,

ನಮ್ಮ ಮನೆಯ ವೈದ್ಯನನ್ನು ಕರೆದುತರಬೇಕೆಂದು ಆ ತೋಟದವನಿಗೆ ಹೇಳು. ಆ ಕೆಲಸದ ಹುಡುಗ ಹೋಗಿ ಯಾರಾದರೂ ಒಬ್ಬ ಪೋಲೀಸಿನವನನ್ನು ಕರೆದುಕೊಂಡು ಬರಲಿ" ಎಂದಳು.

ಅವಳ ಆಜ್ಞೆಯಂತೆ ಅಡುಗೆಯವನು ಆಲಿವರನ್ನು ಎತ್ತಿಕೊಂಡು ಹೋಗಿ ತನ್ನ ಹಾಸಿಗೆಯಲ್ಲಿ ಮಲಗಿಸಿ, ಬೆಚ್ಚಗೆ ಹೊದಿಸಿದ. ಸ್ವಲ್ಪ ಹೊತ್ತಿನೊಳಗಾಗಿ ತೋಟದವನು ವೈದ್ಯನನ್ನು ಕರೆದುಕೊಂಡು ಬಂದ. ವೈದ್ಯ ಬಂದೊಡನೆ ಆಲಿವರನ ತೋಳನ್ನು ನೋಡಿ, ಅದಕ್ಕೆ ಔಷಧ ಹಾಕಿ, ಹೊಸ ಬಟ್ಟೆಗಳಿಂದ ಕಟ್ಟಿ, "ಸದ್ದು ಮಾಡಬೇಡಿ. ಹುಡುಗ ಮಲಗಿರಲಿ" ಎಂದು ಕೊಟಡಿಯಿಂದ ಹೊರಗೆ ಬಂದು, ಮಿಸೆಸ್ ಮೆಯ್ಲಿ ಇದ್ದ ಕೊಟಡಿಗೆ ಹೋಗಿ "ಅವನ ಗಾಯಗಳನ್ನು ತೊಳೆದು ಔಷಧಿ ಹಾಕಿ ಕಟ್ಟಿದ್ದೇನೆ. ನಿದ್ರೆ ಮಾಡುತ್ತಿದ್ದಾನೆ. ಬೇಕಾದರೆ ಬಂದು ನೋಡಬಹುದು" ಎಂದು ಕರೆದನು.

ಮಿಸೆಸ್ ಮೆಯ್ಲಿ ಮತ್ತು ರೋಸ್ ಇಬ್ಬರೂ ವೈದ್ಯನ ಹಿಂದೆ ಸದ್ದು ಮಾಡದೆ ಬಂದು, ಮೆಲ್ಲನೆ ಬಾಗಿಲನ್ನು ತಳ್ಳಿ, ಒಳಗೆ ಇಣಿಕಿ ನೋಡಿದರು, ಹಾಸಿಗೆಯ ಮೇಲೆ ನೋಡಿದರೆ, ತಾವು ಎಂದುಕೊಂಡಿದ್ದ ಹಾಗೆ ಯಾವ ಭಯಂಕರ ವ್ಯಕ್ತಿಯೂ ಅಲ್ಲಿ ಕಾಣಿಸಲಿಲ್ಲ; ಅದರ ಬದಲು ಒಬ್ಬ ಹುಡುಗ ಮಾತ್ರ ನೋವಿನಿಂದ ಉಸಿರು ಬಿಡುತ್ತ ಗಾಢನಿದ್ರೆಯಲ್ಲಿದ್ದುದು ಕಾಣಿಸಿತು.

"ಯಾರು? ಇವನೇ ಕಳ್ಳ? ಪಾಪ, ಮಗು, ತಾಯಿಯಿಲ್ಲವೋ, ತಂದೆಯಿಲ್ಲವೋ, ಯಾವ ತಬ್ಬಲಿಯೋ, ಯಾರ ಸಹವಾಸಕ್ಕೆ ಹೇಗೆ ಬಿದ್ದಿತೋ, ಏನು ಹೊಟ್ಟೆಗಿಲ್ಲವೋ, ಏನು ಕಥೆಯೋ" ಎಂದು ರೋಸ್ ಆಲಿವರನ ತಲೆಗೂದಲನ್ನು ಸವರುತ್ತ, "ದೊಡ್ಡಮ್ಮ, ಈ ಹುಡುಗನನ್ನು ಮನೆಯಲ್ಲೇ ಇರಿಸಿಕೊಂಡು ಏಕೆ ಕಾಪಾಡಬಾರದು?" ಎಂದು ಬೇಡಿಕೊಂಡಳು.

ಮಿಸೆಸ್ ಮೆಯ್ಲಿ ಅವಳನ್ನು ತಬ್ಬಿಕೊಂಡು, "ಹಾಗೇ ಆಗಲಿ, ನನ್ನಮ್ಮ!" ಎಂದಳು. ಆಲಿವರನ್ನು ಕಂಡು ಅವಳ ಕಣ್ಣು ಕೂಡ ತೇವವಾಯಿತು.

ಆದರೆ ವೈದ್ಯ "ಇಷ್ಟು ಅತಿ ಉತ್ಸಾಹ ಬೇಡ. ಅವನಿಗೆ ಸ್ವಲ್ಪ ಎಚ್ಚರವಾದಾಗ, ಅವನು ಯಾರು, ಅವನ ಕತೆ ಏನು ಎಂಬುದು ಎಲ್ಲ ವನ್ನೂ ವಿಚಾರಿಸಿ ತಿಳಿದುಕೊಳ್ಳಿ. ಅನಂತರ ನಿಮ್ಮ ಮನಸ್ಸಿಗೆ ಒಪ್ಪಿಗೆ ಯಾದರೆ ಅವನನ್ನು ಕಾಪಾಡಿ. ಬೇಡವೆನ್ನುವವರಾರು?" ಎಂದನು.

ಹೆಂಗಸರಿಬ್ಬರೂ ಅವನ ಮಾತಿಗೆ ಒಪ್ಪಿದರು. ಆ ದಿನ ಆಲಿವರನ್ನು ಆಯಾಸಪಡಿಸಲಿಲ್ಲ. ಮಾರನೆಯ ದಿನ ಅವನು ಸ್ವಲ್ಪ ಚೇತರಿಸಿಕೊಂಡ ಮೇಲೆ, ಅವನ ಕತೆಯನ್ನೆಲ್ಲಾ ಕೇಳಿದರು. ಆಲಿವರ್ ತಾನು ಅನಾಥಾ ಲಯವನ್ನು ಬಿಟ್ಟುದು ಮೊದಲುಗೊಂಡು, ಲಂಡನ್ನಿಗೆ ಬಂದು ಫ್ಯಾಗಿನ್ನಿನ ಕೈಗೆ ಸಿಕ್ಕಿಬಿದ್ದಿದ್ದು, ಬ್ರೌನ್ಲೊ ತನ್ನನ್ನು ಉದ್ಧಾರ ಮಾಡಿದ್ದು, ಫ್ಯಾಗಿನ್ ತನ್ನನ್ನು ಪುನಃ ಹಿಡಿದು ಕಳ್ಳತನಕ್ಕೆ ತಳ್ಳಿದ್ದು, ಎಲ್ಲವನ್ನೂ ಅವರಿಗೆ ತಿಳಿಸಿದ. ಹೇಳುತ್ತ ಹೇಳುತ್ತ ಆಲಿವರನಿಗೆ ಬ್ರೌನ್ಲೊವಿನ ಜ್ಞಾಪಕ ಬಂದು, "ಆತ ನನಗೆ ಎಷ್ಟು ಆರೈಕೆ ಮಾಡಿದ! ಅವನ ಮನೆಯ ಮುದುಕಿಯಾದರೂ ನನ್ನನ್ನು ಎಷ್ಟು ದಯೆಯಿಂದ ಕಾಣುತ್ತಿದ್ದಳು!" ಎಂದು ಕಣ್ಣಲ್ಲಿ ನೀರು ತುಂಬಿಕೊಂಡ.

ಮಿಸೆಸ್ ಮೆಯ್ಲಿ ಮತ್ತು ರೋಸ್ ಅವನನ್ನು ಸಂತೈಸುತ್ತ, "ಅಳ ಬೇಡ, ಆಲಿವರ್. ನಿನ್ನನ್ನು ನಾವು ನೋಡಿಕೊಳ್ಳುತ್ತೇವೆ. ನೀನು ಏನೂ ಚಿಂತೆ ಮಾಡದೆ ಆರೋಗ್ಯವಾಗು. ಅನಂತರ ನಮ್ಮ ಈ ವೈದ್ಯ ನೊಡನೆ ಹೋಗಿ, ಬ್ರೌನ್ಲೋವನ್ನು ಕಂಡು, ನಡೆದುದನ್ನೆಲ್ಲಾ ಆತನಿಗೆ ಹೇಳಿಬರುವೆಯಂತೆ" ಎಂದು ಸಮಾಧಾನ ಹೇಳಿದರು.

"ನಾನು ಕರೆದುಕೊಂಡು ಹೋಗುತ್ತೇನೆ. ಧೈರ್ಯವಾಗಿರು" ಎಂದು ವೈದ್ಯನೂ ಆಲಿವರನಿಗೆ ಧೈರ್ಯ ಹೇಳಿದ.

"ಇಷ್ಟು ಒಳ್ಳೆಯವರಾದ ಇವರ ಉಪಕಾರವನ್ನು ನಾನು ಹೇಗೆ ತೀರಿಸಲಿ?" ಎಂದು ಆಲಿವರ್ ಕೃತಜ್ಞನಾಗಿ, 'ಎಂದಿಗೆ ಗುಣಮುಖವಾಗಿ ಬ್ರೌನ್ಲೋವನ್ನು ಕಂಡು, ನಡೆದ ಸಂಗತಿಯನ್ನು ಅವನಿಗೆ ತಿಳಿಸಿ, ಅವನ ಕ್ಷಮಾಪಣೆಯನ್ನು ಪಡೆದೇನೋ' ಎಂಬ ನಿರೀಕ್ಷೆಯಿಂದ ಆಲಿವರ್ ವೈದ್ಯ ಹೇಳಿದ ಹಾಗೆ ಕೇಳಿಕೊಂಡಿದ್ದು, ಐದಾರು ವಾರದಲ್ಲಿ ಎದ್ದು ಓಡಿಯಾಡುವ ಮಟ್ಟಿಗಾದ.

ಒಂದು ಬೆಳಗ್ಗೆ ಮಿಸೆಸ್ ಮೆಯ್ಲಿ ತನ್ನ ಸ್ವಂತ ಗಾಡಿಯನ್ನು ಕಟ್ಟಿಸಿ, ವೈದ್ಯನೊಡನೆ ಆಲಿವರನ್ನು ಬ್ರೌನ್ಲೋ ಮನೆಗೆ ಹೋಗಿ ಬರುವಂತೆ ಕಳಿಸಿದಳು. ಆಲಿವರನಿಗೆ ಬ್ರೌನ್ಲೊ ಇದ್ದ ಮನೆಯ ಬೀದಿ ತಿಳಿದಿತ್ತು. ಗಾಡಿಯವನು ಆ ಬೀದಿಗೆ ಬಂದು ತಿರುಗಿದಾಗ, ಆಲಿವರ್ ಉತ್ಸಾಹದಿಂದ ಎದ್ದು ನಿಂತು 'ಅದೇ! ಅದೇ! ಅದೇ ಮನೆ!' ಎಂದು ಒಂದು ಮನೆಯನ್ನು ತೋರಿಸಿದ.

ಆಲಿವರ್ ತೋರಿಸಿದ ಮನೆಯ ಮುಂದೆ ಗಾಡಿ ನಿಂತಿತು. ಆದರೆ ಆ ಮನೆಗೆ ಬೀಗ ಹಾಕಿತ್ತು. ಆಲಿವರನ ಉತ್ಸಾಹವೆಲ್ಲ ಇಂಗಿಹೋಯಿತು. ವೈದ್ಯನು ಅವನನ್ನು ಸಮಾಧಾನಪಡಿಸಿ, ಗಾಡಿಯಿಂದ ಇಳಿದು ಹೋಗಿ "ಈ ಮನೆಯಲ್ಲಿ ಇದ್ದ ಬ್ರೌನ್ಲೊ ಎಲ್ಲಿ?" ಎಂದು ಪಕ್ಕದ ಮನೆಯವನನ್ನು ಕೇಳಿದ.

ಪಕ್ಕದ ಮನೆಯವನು "ನನಗೆ ಗೊತ್ತಿಲ್ಲ. ವಿಚಾರಿಸಿಕೊಂಡು ಬರುತ್ತೇನೆ" ಎಂದು ಒಳಗೆ ಹೋಗಿ ವಿಚಾರಿಸಿಕೊಂಡು ಬಂದು, "ಬ್ರೌನ್ಲೊ ಈಗ ನಾಲ್ಕು ವಾರದ ಹಿಂದೆ ಪಶ್ಚಿಮ ಇಂಡೀಸ್ ದ್ವೀಪಗಳಿಗೆ ಪ್ರವಾಸ ಹೋದನಂತೆ" ಎಂದನು.

"ಅವನ ಮನೆಯಲ್ಲಿ ಇದ್ದ ಮುದುಕಿ?" ಎಂದು ವೈದ್ಯ ಕೇಳಿದ್ದಕ್ಕೆ ಅವನು "ಅವಳು, ಅವಳ ಜೊತೆಗೆ ಇನ್ನೊಬ್ಬ ಗ್ರಿಮ್‌ವಿಗ್ ಎಂಬವ, ಅವರೂ ಬ್ರೌನ್ಲೊ ಜೊತೆಯಲ್ಲಿ ಹೋದರಂತೆ" ಎಂದ.

ಆಲಿವರ್ ಸಂಪೂರ್ಣ ನಿರಾಶೆ ಹೊಂದಿ, ಮುಖದಲ್ಲಿ ಸಂತೋಷ ವಿಲ್ಲದೆ ಮನೆಗೆ ಹಿಂದಿರುಗಿ ಬಂದ. ಮಿಸೆಸ್ ಮೆಯ್ಲಿಯೂ ರೋಸೂ ಅವನಿಗೆ ಸಮಾಧಾನ ಹೇಳಿ ಅವನನ್ನು ಸಂತೋಷಗೊಳಿಸದಿದ್ದಿದ್ದರೆ, ಆಲಿವರ್ ಅದೇ ಕೊರಗಿನಲ್ಲಿ ಪುನಃ ಕಾಯಿಲೆ ಮಲಗಬೇಕಾಗುತ್ತಿತ್ತು. ಆದರೆ ಅವರು ಆಲಿವರನಿಗೆ ಓದುವುದನ್ನೂ ಬರೆಯುವುದನ್ನೂ ಕಲಿಸಿಕೊಟ್ಟು, ಹೂವು ಹಣ್ಣು ತರುವುದಕ್ಕೆ ಅವನನ್ನೇ ಕಳುಹಿಸಿಕೊಟ್ಟು, ಅವನನ್ನು ಯಾವಾಗಲೂ ತಮ್ಮ ಜೊತೆಯಲ್ಲೇ ಇರಿಸಿಕೊಂಡು, ಅವನನ್ನು ಕಂಡರೆ ತಮಗೆ ಎಷ್ಟು ಪ್ರೀತಿ ಇದೆ, ಅವನಲ್ಲಿ ತಮಗೆ ಎಷ್ಟು ನಂಬಿಕೆ ಉಂಟು ಎಂಬುದನ್ನು ತೋರಿಸುತ್ತಿದ್ದರು. ಅವರ ಅವ್ಯಾಜವಾದ ಪ್ರೇಮದಲ್ಲಿ ಆಲಿವರ್ ಬ್ರೌನ್ಲೋವನ್ನು ಕಾಣದೆ ತನಗೆ ಉಂಟಾದ ನಿರಾಶೆಯನ್ನು ಮರೆಯುವುದು ಸಾಧ್ಯವಾಯಿತು.

ಹೀಗೆ ಮೂರು ತಿಂಗಳು ಕಳೆಯಿತು.

ಈ ನಡುವೆ ನ್ಯಾನ್ಸಿ ಫ್ಯಾಗಿನ್ನಿನ ಗುಹೆಯಲ್ಲಿ ತನ್ನ ಕಿವಿಗೆ ಬಿದ್ದ ಒಂದು ರಹಸ್ಯವಾದ ಸಮಾಚಾರವನ್ನು ಕೇಳಿ, ಅದರಿಂದ ಆಲಿವರನಿಗಾಗುವ ಅಪಾಯವನ್ನು ಹೇಗಾದರೂ ತಪ್ಪಿಸಬೇಕೆಂದುಕೊಂಡಳು. ಒಂದು ದಿನ ಅಪರಿಚಿತನೊಬ್ಬನು ಫ್ಯಾಗಿನ್ನಿನ ಬಳಿಗೆ ಬಂದು, "ನನ್ನ ಹೆಸರು ಮಂಕ್ಸ್. ನನಗೂ ನಿನ್ನ ಬಳಿಯಿದ್ದ ಆಲಿವರ್ ಟ್ವಿಸ್ಟಿಗೂ ಸ್ವಲ್ಪ ಮನಸ್ತಾಪವಿದೆ. ನೀನು ಏನಾದರೂ ಮಾಡಿ, ಅವನಿಂದ ಕಳ್ಳತನ ಮಾಡಿಸಿ, ಅವನನ್ನು ಸೆರೆಮನೆಗೆ ಕಳಿಸಿದರೆ, ನಾನು ನಿನಗೆ ತುಂಬ ಹಣ ಕೊಡುತ್ತೇನೆ" ಎಂದು ಕೇಳಿಕೊಂಡ. ಅದು ನ್ಯಾನ್ಸಿಯ ಕಿವಿಗೆ ಬಿತ್ತು. ಅವಳು ಆ ಸುದ್ದಿಯನ್ನು ರೋಸ್‌ಗೆ ತಿಳಿಸಿ, ಆಲಿವರನ್ನು ಎಚ್ಚರದಿಂದ ಕಾಪಾಡಬೇಕೆಂದು ಕಾಗದ ಬರೆದಳು. ಅಗತ್ಯವಾದರೆ ಅವಳನ್ನು ಲಂಡನ್ ನದಿಯ ಸೇತುವೆಯ ಬಳಿ ಯಾವುದಾದರೂ ರಾತ್ರೆ ಕಾಣುವಂತೆಯೂ ಸೂಚಿಸಿದ್ದಳು.

ಈ ಸಂದರ್ಭದಲ್ಲಿ ನಾನು ಏನು ಮಾಡಬೇಕೋ, ಯಾರಾದರೂ ಸ್ನೇಹಿತರನ್ನು ವಿಚಾರಿಸೋಣ ಎಂದು ರೋಸ್ ಎಂದುಕೊಳ್ಳುತ್ತಿರುವಷ್ಟರಲ್ಲಿ ಆಲಿವರ್ ಏದುತ್ತ ಓಡಿಬಂದು "ಕಂಡೆ! ಕಂಡೆ!" ಎಂದು ಕೂಗಿಕೊಂಡ.

"ಏನದು, ಆಲಿವರ್? ಏನು ಕಂಡೆ?" ಎಂದು ರೋಸ್ ಕೇಳಲು "ನಾನು ನಮ್ಮ ಮನೆಯ ಅಡುಗೆಯವನ ಜೊತೆಯಲ್ಲಿ ಹೋಗುತ್ತಿದ್ದಾಗ, ದಾರಿಯಲ್ಲಿ ಬ್ರೌನ್ಲೊ ಹೋಗುತ್ತಿದ್ದುದನ್ನು ಕಂಡೆ. ಅವನ ಕಡೆಗೆ ಹೋಗುವುದಕ್ಕೆ ನನಗೆ ಕಾಲೇ ಬರಲಿಲ್ಲ, ಅವನನ್ನು ಮಾತನಾಡಿಸುವುದಕ್ಕೆ ನನಗೆ ನಾಲಗೆಯೇ ಬರಲಿಲ್ಲ. ಆದರೆ ಅಡುಗೆಯವನು ಹೋಗಿ ಆತನ ವಿಳಾಸವನ್ನು ತಿಳಿದುಕೊಂಡು ಬಂದಿದ್ದಾನೆ" ಎಂದು ಬ್ರೌನ್ಲೋವಿನ ವಿಳಾಸವನ್ನು ಬರೆದಿದ್ದ ಒಂದು ಕಾಗದದ ಚೂರನ್ನು ರೋಸ್ ಕೈಯಲ್ಲಿ ಆಲಿವರ್ ಕೊಟ್ಟನು.

ಒಡನೆಯೇ ರೋಸ್ ಮನೆಯ ಗಾಡಿಯನ್ನು ಕಟ್ಟಹೇಳಿ, ತಾನು ಬಟ್ಟೆ ಬದಲಾಯಿಸಿಕೊಂಡು, ಆಲಿವರನೊಡನೆ ಬ್ರೌನ್ಲೋವಿನ ಮನೆಗೆ ಹೊರಟಳು. ಆಲಿವರನನ್ನಾದರೂ ಎರಡು ಸಲ ಕರೆಯಬೇಕಾಗಿರಲಿಲ್ಲ. ಗಾಡಿಯಾದರೂ ತಡವಾಗಲಿಲ್ಲ. ಆಲಿವರ್ ಸುದ್ದಿಯನ್ನು ತಂದ ಕೆಲವೇ ಹೊತ್ತಿನೊಳಗಾಗಿ ಗಾಡಿ ಬ್ರೌನ್ಲೋವಿನ ಮನೆಯೇ ಮುಂದೆ ನಿಂತಿತು.

ರೋಸ್ ಆಲಿವರನ್ನು ಗಾಡಿಯಲ್ಲೇ ಇರಹೇಳಿ, ತಾನು ಮಾತ್ರ ಮನೆಯ ಮೆಟ್ಟಲು ಹತ್ತಿ, ತನ್ನ ಹೆಸರನ್ನು ಹೇಳಿಕಳಿಸಿದಳು. ಬ್ರೌನ್ಲೊ ಅವಳನ್ನು ಒಳಕ್ಕೆ ಬರಹೇಳಿ, ಅವಳು ಬಂದ ಬಳಿಕ ಅವಳನ್ನು ಗ್ರಿಮ್ ವಿಗ್ಗಿಗೆ ಪರಿಚಯ ಮಾಡಿಕೊಟ್ಟ.

ಪರಸ್ಪರ ಪರಿಚಯವಾದ ಮೇಲೆ ರೋಸ್ ಆಲಿವರನ ವಿಷಯವನ್ನು ಎತ್ತಿ, ಅವನು ಬ್ರೌನ್ಲೋವಿನ ಮನೆಯಿಂದ ಹೊರಟ ಮೇಲೆ ತಮ್ಮ

ಮನೆಗೆ ಬಂದು ಆಶ್ರಯ ಪಡೆಯುವ ವರೆಗಿನ ವೃತ್ತಾಂತವೆಲ್ಲವನ್ನೂ ತಿಳಿಸಿದಳು.

ಬ್ರೌನ್ಲೋ ಏನೋ ಮಹಾಭಾರ ತನ್ನ ಎದೆಯ ಮೇಲಿಂದ ಇಳಿದು ಹೋದ ಹಾಗೆ ಉಸಿರು ಬಿಟ್ಟು, "ತಾಯಿ, ಈ ದಿನ ನೀನು ನನ್ನ ಜೀವಕ್ಕೆ ಹೊಸ ಕಳೆ ಕೊಟ್ಟಿದ್ದೀಯೆ. ನಾನು ನೋಡಿ ನಂಬಿದ ಹುಡುಗ ನನಗೆ ಮೋಸ ಮಾಡಿದನೇ ಎಂದು ಖೇದಪಡುತ್ತಿದ್ದ ನನಗೆ ಪುನಃ ಆ ಹುಡುಗನಲ್ಲಿ ನಂಬಿಕೆ ಬರುವಂತೆ ಮಾಡಿದ್ದೀಯೆ" ಎಂದು ಸಂಭ್ರಮ ದಿಂದ ಹೇಳಿದ.

ನಡುವೆ ಗ್ರಿಮ್‌ವಿಗ್ "ನೀನು ಏನು ಹೇಳಿದರೂ, ಆ ಹುಡುಗ ಶುದ್ಧ ಪೋಕರಿ. ಈ ಮಾತು ಸುಳ್ಳಾದರೆ ನೀವು ನನ್ನನ್ನು ಕೊಂದು ತಿಂದಾಣೆ" ಎಂದ.

ರೋಸ್ ಕೋಪದಿಂದ ಎದ್ದು "ನೀವು ಹೀಗೆಲ್ಲ ತಿಳಿಯದೆ ಮಾತ ನಾಡುವುದು ಮರ್ಯಾದೆಯಲ್ಲ" ಎಂದಳು.

ಬ್ರೌನ್ಲೋ ಅವಳನ್ನು ಸಮಾಧಾನಗೊಳಿಸುತ್ತ "ನೀನೇನೂ ಕೋಪ ಗೊಳ್ಳಬೇಕಾದ ಅಗತ್ಯವಿಲ್ಲ. ಅವನ ಸ್ವಭಾವವೇ ಹಾಗೆ. ಯಾರು ಏನು ಹೇಳಿದರೂ ಅದಕ್ಕೆ ಪ್ರತಿ ಹೇಳದಿದ್ದರೆ ಅವನ ಜೀವಕ್ಕೆ ಸಮಾ ಧಾನವಿಲ್ಲ" ಎಂದು ಹೇಳಿ, "ಅದು ಸರಿ. ಆದರೆ ಆಲಿವರ್ ಎಲ್ಲಿ?" ಎಂದು ಕೇಳಿದ.

"ಇಲ್ಲೇ ಮನೆಯ ಮುಂದೆ ಗಾಡಿಯಲ್ಲಿ ಕುಳಿತಿದ್ದಾನೆ" ಎಂದು ರೋಸ್ ಹೇಳಿದಳೋ ಇಲ್ಲವೋ, "ಹಾ! ಹಾಗೆಯೆ! ಇಷ್ಟು ಹೊತ್ತೂ ಏಕೆ ಹೇಳಲಿಲ್ಲ!" ಎಂದು ಬ್ರೌನ್ಲೋ ದಿಗ್ಗನೆದ್ದು, ಒಂದೇ ಹಾರಿಗೆ ಹಾರಿ, ಬಾಗಿಲು ತೆರೆದು, ಮೆಟ್ಟಲು ಇಳಿದು, ಗಾಡಿಯೊಳಕ್ಕೆ ನುಗ್ಗಿ, ಆಲಿವರನ್ನು ಗಾಢವಾಗಿ ತಬ್ಬಿಕೊಂಡು, ಸಂತೋಷದಿಂದ ಅತ್ತುಬಿಟ್ಟ.

ಅನಂತರ ಆಲಿವರನ್ನು ಕರೆದುಕೊಂಡು ಮನೆಯೊಳಕ್ಕೆ ಬಂದು, "ಅಜ್ಜೀ! ಇಲ್ಲಿ ಯಾರು ಬಂದಿದ್ದಾರೆ ನೋಡು ಬಾ!" ಎಂದು ಕೂಗಿದ.

ಮನೆಯ ಮುದುಕಿ ಬಂದು ನೋಡಿದಳು. ಕಣ್ಣು ಮಂದವಾಗಿದ್ದುದರಿಂದ ಬೇಗ ಗುರುತು ಹತ್ತಲಿಲ್ಲ. ಹತ್ತಿರ ಬಂದು, ಕನ್ನಡಕವನ್ನು ಮೂಗಿನ ಮೇಲಿಟ್ಟು ಅವಳು ಗುರುತು ಹಿಡಿಯುವವರೆಗೂ ಆಲಿವರನಿಗೆ ತಾಳ್ಮೆಯಿರಲಿಲ್ಲ. ಓಡಿಹೋಗಿ ಅವಳನ್ನು ತಬ್ಬಿಕೊಂಡ.

"ಅಯ್ಯೋ, ಯಾರು? ನಮ್ಮ ಮಗುವೇ! ಆಲಿವರ್!" ಎಂದು ಮುದುಕಿ ಅವನನ್ನು ವಿಶ್ವಾಸದಿಂದ ಮುದ್ದಾಡಿ, ಕಣ್ಣಿನಲ್ಲಿ ಚಿಮ್ಮಿದ ಆನಂದಾಶ್ರುಗಳನ್ನು ಒರಸುತ್ತ, "ನಾನು ಹೇಳಲಿಲ್ಲವೆ? ಹುಡುಗ ಎಂದಾದರೂ ಬಂದೇ ಬರುತ್ತಾನೆ ಎಂದು ನಾನು ಹೇಳಲಿಲ್ಲವೆ!" ಎಂದು ಸಂಭ್ರಮದಿಂದ ಸುತ್ತ ಇದ್ದವರ ಮುಖಗಳನ್ನು ನೋಡುತ್ತಾ, ಆಲಿವರನ್ನು ಮತ್ತೆ ಮತ್ತೆ ಮುದ್ದಾಡಿದಳು.

ಆಗ ಬ್ರೌನ್ಲೊ ಅವರಿಬ್ಬರನ್ನೂ ಅಲ್ಲಿ ಬಿಟ್ಟು, ರೋಸನ್ನು ಕರೆದುಕೊಂಡು ಬೇರೆ ಕೊಟಡಿಗೆ ಹೋದ. ಅಲ್ಲಿ ರೋಸ್, ನ್ಯಾನ್ಸಿ ತನಗೆ ಬರೆದ ಕಾಗದವನ್ನೂ, ಅದರಲ್ಲಿ ಸೂಚಿಸಿದ್ದಂತೆ ಆಲಿವರನಿಗೆ ಅಪಾಯವಾಗದಿರಬೇಕಾದರೆ ಏನು ಮಾಡಬೇಕೆಂಬುದನ್ನೂ ಕುರಿತು ಅವನ ಸಲಹೆಯನ್ನು ಕೇಳಿದಳು.

ಬ್ರೌನ್ಲೊ ಅವಳು ಹೇಳಿದುದೆಲ್ಲವನ್ನೂ ಸಾವಧಾನವಾಗಿ ಕೇಳಿ, "ಒಳ್ಳೆಯದು, ರೋಸ್. ನೀನೇನೂ ಹೆದರಬೇಡ. ಆಲಿವರನಿಗೆ ಏನೂ ಅಪಾಯವಾಗದ ಹಾಗೆ ನಾನು ಎಚ್ಚರಿಕೆ ತೆಗೆದುಕೊಳ್ಳುತ್ತೇನೆ" ಎಂದು ಅವಳಿಗೆ ಧೈರ್ಯ ಹೇಳಿದ.

ಅನಂತರ ರೋಸ್ ಆಲಿವರನ್ನು ಕರೆದುಕೊಂಡು ಮನೆಗೆ ಹೋದಳು.

## ಸೈಕ್ಸಿನ ಕಡೆಗಾಲ

ನ್ಯಾನ್ಸಿ ರೋಸಿಗೆ ಮೊದಲು ಕಾಗದ ಬರೆದ ಮೇಲೆ, ಫ್ಯಾಗಿನ್ನಿನ ಗುಹೆಯಲ್ಲಿ ಇನ್ನೂ ಏನೇನು ನಡೆಯಿತೋ ಅದನ್ನೆಲ್ಲ ತಿಳಿಸುವುದಕ್ಕಾಗಿ ಇಂಥ ದಿವಸ ರಾತ್ರಿ ಲಂಡನ್ ನದಿಯ ಸೇತುವೆಯ ಬಳಿ ಬರಬೇಕೆಂದು ರೋಸಿಗೆ ಮತ್ತೆ ಕಾಗದ ಬರೆದಳು.

ಆದರೆ ಈಚೀಚೆಗೆ ಫ್ಯಾಗಿನ್ನಿಗೆ ನ್ಯಾನ್ಸಿಯ ಮೇಲೆ ಏನೋ ಸಂಶಯ ಬಂದಿತ್ತು. ಅವಳು ತಮ್ಮ ಗುಟ್ಟುಗಳನ್ನು ಯಾರಿಗೋ ಹೇಳುತ್ತಿರುವ ಳೆಂದು ಅನುಮಾನವಾಗಿತ್ತು. ಅದಕ್ಕಾಗಿ ತನ್ನ ಕಳ್ಳರ ಕೂಟದವ ನೊಬ್ಬನನ್ನು ಗುಟ್ಟಾಗಿ ನ್ಯಾನ್ಸಿಯ ಹಿಂದೆ ಕಳುಹಿಸಿ, ಅವಳು ರೋಸನ್ನು ಹೇಗೆ ಸಂಧಿಸುತ್ತಿದ್ದಳೆಂಬುದನ್ನು ತಿಳಿದುಕೊಂಡ.

ಆ ತಿಳಿವಳಿಕೆಯಿಂದ ಫ್ಯಾಗಿನ್ನಿಗೆ ಉಂಟಾದ ಮಹಾ ರೋಷ ವರ್ಣಿಸಲು ಅಸಾಧ್ಯ. ಕಣ್ಣು ರಕ್ತದ ಬಣ್ಣಕ್ಕೆ ತಿರುಗಿತು, ಬಾಯಲ್ಲಿ ನೊರೆ ಉಕ್ಕಿತ್ತು, ಮೈ ಚಳಿ ಬಂದಂತೆ ಅದುರಿತು, ತುಟಿ ವಿವರ್ಣವಾಯಿತು, ಹಲ್ಲುಗಳನ್ನು ಕಟಕಟನೆ ಕಡಿದ, ತನ್ನ ಕೈಯ ಮೂಳೆಬೆರಳುಗಳನ್ನು ಮಡಿಚಿ ಮುಷ್ಟಿ ಬಿಗಿದ, ಸುಮ್ಮನೆ ಕುಳಿತುಕೊಳ್ಳಲಾರದೆ ಉಗುರುಗಳನ್ನು ಕಡಿದ. “ಸೈಕ್ಸ್ ಬರಲಿ! ಸೈಕ್ಸ್ ಬರಲಿ!” ಎಂದು ಗೊಣಗುಟ್ಟುತ್ತ ತನ್ನ ಕೊಟಡಿಯಲ್ಲಿ ಶತಪಥ ತಿರುಗಿದ.

ರಾತ್ರಿ ಕಳೆದು ಬೆಳಕು ಹರಿಯುತ್ತಿರುವ ಹೊತ್ತಿಗೆ ಯಾರೋ ಬಾಗಿಲು ಚಿಲಕ ಶಬ್ದಮಾಡಿದ ಹಾಗಾಯಿತು. “ಅದೋ ಬಂದ!” ಎಂದು ಫ್ಯಾಗಿನ್ ಬಾಗಿಲು ತೆಗೆದು, ಸೈಕ್ಸ್‌ನ್ನು ಒಳಗೆ ಬಿಟ್ಟ. ಸೈಕ್ಸ್ ತಾನು ಕಳ್ಳತನ ಮಾಡಿ ತಂದಿದ್ದ ವಸ್ತುಗಳ ಗಂಟನ್ನು ಫ್ಯಾಗಿನ್ನಿನ ಮುಂದೆ ಕುಕ್ಕಿದ. ಫ್ಯಾಗಿನ್ ಆ ಗಂಟನ್ನು ತೆಗೆದು ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿ

ಬಂದು, ಸೈಕ್ಸಿನ ಎದುರು ಒಂದು ಕುರ್ಚಿಯಲ್ಲಿ ಕುಳಿತು, ಸುಮ್ಮನೆ ಅವ
ನನ್ನು ದುರುದುರು ನೋಡಿದ.

"ಏಕೆ ಹಾಗೆ ದುರುಗುಟ್ಟುತ್ತೀಯೆ?" ಎಂದು ಸೈಕ್ಸ್ ಕೇಳಿದ.

"ಏಕೆ ಎಂದು ಕೇಳುತ್ತೀಯಾ?" ಎಂದು ಫ್ಯಾಗಿನ್ ಎದ್ದು, ಅಲ್ಲಿ
ಒಂದು ಮೂಲೆಯಲ್ಲಿ ಮಲಗಿದ್ದವನೊಬ್ಬನನ್ನು ಎಬ್ಬಿಸಿದ.

ಅವನೇ ನ್ಯಾನ್ಸಿಯನ್ನು ಹಿಂಬಾಲಿಸಿ ಅವಳ ವರ್ತನೆಯನ್ನು ಫ್ಯಾಗಿ
ನ್ನಿಗೆ ವರದಿ ಮಾಡಿದ್ದವ. ಅವನು ಬೇರೆ ಯಾರೂ ಅಲ್ಲ. ಹಿಂದೆ ಸವರ್
ಬೆರಿಯ ಮನೆಯಲ್ಲಿ ಆಲಿವರನ ಕೈಯಿಂದ ಏಟು ತಿಂದಿದ್ದ ನೋಹ
ಕ್ಲೇಪೋಲ್. ಅವನು ಸವರ್ ಬೆರಿಯ ಮನೆಯಲ್ಲಿದ್ದಾಗಲೆ ಪುಂಡರು ಪೋಕರಿ
ಗಳ ಜೊತೆಯಲ್ಲಿ ಸೇರುತ್ತಿದ್ದ. ಬರುಬರುತ್ತ ಅನಿಷ್ಟ ಸಹವಾಸಗಳಿಂದ
ತೀರಕೆಟ್ಟು, ಲಂಡನ್ನಿಗೆ ಓಡಿಬಂದು, ಅಲ್ಲಿ ಫ್ಯಾಗಿನ್ನಿನ ಕೊಂಪೆಗೆ ಸೇರಿ
ಕೊಂಡಿದ್ದ. ಆಲಿವರನ ಹೆಸರನ್ನು ಕೇಳಿದೊಡನೆ, ಹೇಗಾದರೂ ಮಾಡಿ
ಆಲಿವರನ್ನು ಹಾಳುಮಾಡಬೇಕೆಂದು ನಿಶ್ಚಯಿಸಿ, ಆಲಿವರನಿಗೆ ಸಹಾಯ
ಮಾಡಬೇಕೆಂದು ಪ್ರಯತ್ನಿಸುತ್ತಿದ್ದ ನ್ಯಾನ್ಸಿಗೆ ವಿರುದ್ಧವಾಗಿ ತಾನು
ಕಂಡದ್ದು, ಕಾಣದ್ದು, ಕೇಳಿದ್ದು, ಕೇಳದ್ದು ಎಲ್ಲವನ್ನೂ ಜೋಡಿಸಿ ಫ್ಯಾಗಿ
ನ್ನಿಗೆ ಮಹಾರೋಷ ಬರುವಂತೆ ಹೇಳಿದ್ದ.

ಫ್ಯಾಗಿನ್ ಬಂದು, ಕಾಲಿನಿಂದ ತಿವಿದು, ಎಬ್ಬಿಸಿದೊಡನೆ ನೋಹ
ಕಣ್ಣುಜ್ಜಿಕೊಂಡು ಎದ್ದ. ನೋಹನಿಗೋ ಬೆಳಗಿನ ಜಾವದ ಒಳ್ಳೆಯ
ನಿದ್ರೆ. ಆದರೆ ಫ್ಯಾಗಿನ್ ಅವನನ್ನು ಮಲಗಗೊಡಬೇಕಲ್ಲ. ಎಬ್ಬಿಸಿ
ಕೂರಿಸಿ ಅವನ ಬಾಯಿಂದ ಅವನು ತನಗೆ ಹೇಳಿದ ಕಥೆಯನ್ನೆಲ್ಲಾ
ಫ್ಯಾಗಿನ್ ಸೈಕ್ಸಿನ ಕಿವಿಯಲ್ಲಿ ಬಿತ್ತಿಸಿದ.

ನ್ಯಾನ್ಸಿ ಅರ್ಧರಾತ್ರಿಯಲ್ಲಿ ಮುಸುಕು ಹಾಕಿಕೊಂಡು ಒಬ್ಬಳೇ
ಹೊರಟದ್ದು, ತಾನು ಅವಳನ್ನು ಹಿಂಬಾಲಿಸಿದ್ದು, ಲಂಡನ್ ನದಿಯ
ಸೇತುವೆಯ ಹತ್ತಿರ ಅವಳು ಇಬ್ಬರನ್ನು ಭೇಟಿಯಾದುದ್ದು, ಆ ಇಬ್ಬರಲ್ಲಿ

ಒಬ್ಬ ಮುದುಕನಿಗೆ ನ್ಯಾನ್ಸಿ ಫ್ಯಾಗಿನ್ನಿನ ಕಳ್ಳರ ಕೂಟದವರ ಹೆಸರುಗಳನ್ನೆಲ್ಲಾ ಹೇಳಿದ್ದು– ಇವುಗಳೆಲ್ಲವನ್ನೂ ನೋಹ ಫ್ಯಾಗಿನ್ ಚುಚ್ಚಿ ಕೇಳಿದ ಮೇಲೆ ಒಂದೊಂದಾಗಿ ಹೇಳಿದ.

"ನೋಹ! ಇದನ್ನು ಮರೆತುಬಿಟ್ಟೆಯಲ್ಲ! ಹೋದ ವಾರ ನ್ಯಾನ್ಸಿ ಅವರನ್ನು ಕಾಣಲು ಬರದೆ ಇದ್ದುದಕ್ಕೆ ಏನು ಕಾರಣ ಹೇಳಿದಳೋ ಅದನ್ನು ಹೇಳು. ಸೈಕ್ಸ್ ಕೇಳಲಿ" ಎಂದ ಫ್ಯಾಗಿನ್.

ನೋಹ "ಬಿಟ್ಟರೆ ಸಾಕು. ಮಲಗಿಕೊಂಡೇನು" ಎಂದು, "ಹೋದ ವಾರ ಸೈಕ್ಸಿನ ಕೈಯಿಂದ ತಪ್ಪಿಸಿಕೊಂಡು ಬರಲು ಸಾಧ್ಯವಾಗಲಿಲ್ಲವಂತೆ. ರಾತ್ರಿಯೆಲ್ಲಾ ಸೈಕ್ಸ್ ಎಚ್ಚರವಾಗಿದ್ದನಂತೆ. ಆದರೆ ಈ ರಾತ್ರಿ ಸೈಕ್ಸ್ ಕುಡಿದ ಮದ್ಯದಲ್ಲಿ ನಿದ್ರೆ ಬರುವ ಮದ್ದನ್ನು ಬೆರಸಿ, ಅವನಿಗೆ ನಿದ್ರೆ ಬಂದೊಡನೆ ತಾನು ಬಂದಳಂತೆ. ನ್ಯಾನ್ಸಿ ಹೀಗೆ ಹೇಳಿದಳು" ಎಂದ.

ಆ ಮಾತು ಕೇಳಿದೊಡನೆ ಸೈಕ್ಸ್ ಸಿಡಿದೆದ್ದ. ಫ್ಯಾಗಿನ್ ಅವನನ್ನು ತಡೆಯಬೇಕೆಂದು ಅವನ ತೋಳಿನ ಮೇಲೆ ಕೈಹಾಕಿದರೆ, ಸೈಕ್ಸ್ ಅವನ ಕೈಯನ್ನು ಕಿತ್ತೊಗೆದು, ಅವನನ್ನು ಮೂಲೆಗೆ ತಳ್ಳಿ, ಹೊರಟ. "ಬಿಲ್! ಬಿಲ್!" ಎಂದು ಬೇಡಿಕೊಳ್ಳುತ್ತ ಫ್ಯಾಗಿನ್ ಅವನ ಹಿಂದೆ ಬಂದ. ಸೈಕ್ಸಿನ ಕೋಪಮುದ್ರೆಯನ್ನು ಕಂಡು ಫ್ಯಾಗಿನ್ನಿಗೆ ಕೂಡ ಕಳವಳವಾಯಿತು. ಸೈಕ್ಸ್ ಬಾಗಿಲು ಬಳಿ ನಿಂತು, "ಏನು?" ಎಂದು ಗರ್ಜಿಸಿದ. "ಬಿಲ್! ದುಡುಕಬೇಡ" ಎಂದು ಫ್ಯಾಗಿನ್ ಹೇಳುತ್ತಿರುವಷ್ಟರಲ್ಲಿ ಸೈಕ್ಸ್ ಬಾಗಿಲು ತೆರೆದುಕೊಂಡು ಹೊರಟೇಹೋಗಿದ್ದ.

ಫ್ಯಾಗಿನ್ನಿನ ಮನೆಯಿಂದ ಹೊರಟ ಸೈಕ್ಸ್ ಎಲ್ಲಿಯೂ ನಿಲ್ಲದೆ ನೇರವಾಗಿ ನ್ಯಾನ್ಸಿ ಇದ್ದ ಮನೆಗೆ ಬಂದ. ಇನ್ನೂ ಪೂರ್ಣವಾಗಿ ಬೆಳಕು ಹರಿದಿರಲಿಲ್ಲ. ಒಳಗೆ ನ್ಯಾನ್ಸಿ ಇನ್ನೂ ಮಲಗಿ ನಿದ್ರಿಸುತ್ತಿದ್ದಳು. ಸೈಕ್ಸ್ ಮನೆಯೊಳಕ್ಕೆ ಹೋದ. ನ್ಯಾನ್ಸಿಯ ಬಳಿಗೆ ಬಂದ. ಎರಡು ಕ್ಷಣ

ಕಳೆದು ಅವನು ಮನೆಯಿಂದ ಈಚೆ ಬಂದಾಗ ಒಳಗೆ ನ್ಯಾನ್ಸಿ ಸತ್ತು ಹೆಣವಾಗಿ ಬಿದ್ದಿದ್ದಳು.

ತಾನು ಮಾಡಿದ ಕೊಲೆ ಬೇಗನೆ ತಿಳಿದುಹೋಗಬಾರದೆಂದು ಸೈಕ್ಸ್ ಮನೆಯ ಬಾಗಿಲಿಗೆ ಬೀಗ ಹಾಕಿಕೊಂಡು ಹೊರಟ. ಆದರೆ ಎಲ್ಲಿಗೆ ಹೋಗುವುದು? ಕಾಲು ತಿರುಗಿದ ಕಡೆಗೆ ನಡೆದ. ಲಂಡನ್ನಿನಿಂದ ಹೊರಗೆ ಹೊರಟು, ನಾಲ್ಕಾರು ಹಳ್ಳಿಗಳನ್ನು ದಾಟಿಹೋದ. ಎಲ್ಲೆಲ್ಲಿ ಹೋದರೂ, ಜನರೆಲ್ಲರೂ ತನ್ನನ್ನೇ ಸಂಶಯದಿಂದ ದೃಷ್ಟಿಸುತ್ತಿರುವಂತೆ ಕಂಡುಬಂತು. ಕಳ್ಳನ ಮನಸ್ಸು ಹುಳ್ಳಹುಳ್ಳಗೆ ಎಂಬ ಗಾದೆ ತಪ್ಪಲ್ಲ. ಬೆಳಗಿನಿಂದ ಊಟವಿಲ್ಲ, ತಿಂಡಿ ತೀರ್ಥವಿಲ್ಲ, ಎಲ್ಲಿಯೂ ಒಂದು ನಿಮಿಷ ಕುಳಿತು ವಿಶ್ರಮಿಸಿಕೊಳ್ಳಲು ಧೈರ್ಯವಿಲ್ಲ.

ಸೈಕ್ಸ್ ನ್ಯಾನ್ಸಿಯನ್ನು ಕೊಲೆಮಾಡಿ ಲಂಡನ್ನಿನಿಂದ ಹೊರಟಾಗ ಅವನ ನಾಯಿ ಕೂಡ ಅವನ ಹಿಂದೆಯೇ ಹೊರಟಿತು. ಅವನಂತೆಯೇ ಅವನ ನಾಯಿಗಾದರೂ ಬೆಳಗಿನಿಂದ ಅನ್ನವಿಲ್ಲ, ನಿಂತಲ್ಲಿ ನಿಲ್ಲುವುದಾಗಲಿಲ್ಲ.

ಹೀಗೆಯೇ ಅಲೆಯುತ್ತ, ರಾತ್ರಿ ಒಂಬತ್ತು ಗಂಟೆಯಾಗುವ ಹೊತ್ತಿಗೆ ಮಾರ್ಗದಲ್ಲಿ ಒಂದು ಊಟದಂಗಡಿ ಸಿಕ್ಕಿತು. ಸೈಕ್ಸ್ ಒಳಗೆ ಹೋಗಿ ತಿನ್ನುವುದಕ್ಕೆ ಒಂದಿಷ್ಟು ತರಿಸಿಕೊಂಡ. ಹಿಂದೆಯೇ ಬಂದ ನಾಯಿಗೆ ಒಂದಿಷ್ಟು ಎಸೆದ, ತಾನೂ ಒಂದಿಷ್ಟು ತಿಂದ.

ರಾತ್ರಿ ಅಲ್ಲಿಯೇ ನಿಲ್ಲಲು ಮನಸ್ಸಿಗೆ ಸಮಾಧಾನವಿರಲಿಲ್ಲ. ತಿಂದು ಮುಗಿಸಿದ ಕೂಡಲೆ ಸೈಕ್ಸ್ ಅಲ್ಲಿಂದ ಊರಾಚೆ ಹೊರಟ. ದಾರಿಯಲ್ಲಿ ಒಂದು ಹೊಲದ ಮಧ್ಯೆ ಒಂದು ಮುರುಕಲು ಗುಡಿಸಿಲು ಕಾಣಿಸಿತು. ಸೈಕ್ಸ್ ಅಲ್ಲಿಗೆ ಹೋದ. ಅಲ್ಲಿ ಯಾರೂ ಇರಲಿಲ್ಲ. ದಿನವೆಲ್ಲಾ ನಡೆದೂ ನಡೆದೂ ಅವನಿಗೆ ಸಾಕಾಗಿತ್ತು. ರಾತ್ರಿ ಆ ಮುರುಕಲು ಗುಡಿಸಿಲಲ್ಲೇ ಬಿದ್ದುಕೊಂಡ. ನಾಯಿಯೂ ಅಲ್ಲೇ ಮುದುರಿಕೊಂಡಿತು.

ರಾತ್ರಿಯೆಲ್ಲ ಅವನಿಗೆ ಏನೋ ಭಯ, ಏನೋ ಕಳವಳ, ಏನೋ ದಿಗಿಲು. ಮೈಯೆಲ್ಲ ನಡುಕ, ಮೈಯೆಲ್ಲ ಬೆವರು. "ಬೆಳಗಾದರೆ ಸಾಕು" ಎನ್ನಿಸಿಬಿಟ್ಟಿತ್ತು. "ಬೆಳಗಾದೊಡನೆ, ನನ್ನನ್ನು ಶೂಲಕ್ಕೆ ಹಾಕಿದರೂ ಸರಿಯೆ, ನಾನು ಲಂಡನ್ನಿಗೆ ಹಿಂದಿರುಗುವುದೇ ಖಂಡಿತ" ಎಂದು ನಿಶ್ಚಯ ಮಾಡಿಕೊಂಡ.

ಬೆಳಗಾದೊಡನೆ "ಲಂಡನ್ನಿಗೆ ಹೋದರೆ, ಈ ಅಲೆತವಾದರೂ ತಪ್ಪುತ್ತದೆ. ಜೊತೆಗೆ ಯಾರಾದರೂ ಇರುತ್ತಾರೆ. ಎಲ್ಲಿಯಾದರೂ ತಲೆ ಮರೆಸಿಕೊಳ್ಳಬಹುದು. ಒಂದೆರಡು ವಾರ ಅಡಗಿಕೊಂಡಿದ್ದು, ಅನಂತರ ಫ್ರಾನ್ಸಿಗಾದರೂ ಓಡಿಹೋಗಬಹುದು" ಎಂದುಕೊಂಡು ಎದ್ದು, ಲಂಡನ್ನಿನ ಕಡೆಗೆ ಹಿಂದಿರುಗಿದ. ನಾಯಿಯೂ ಅವನ ಹಿಂದೆಯೇ ಹೊರಟಿತು.

ಹಾಗೇ ಹೋಗುತ್ತಿರುವಾಗ ಸೈಕ್ಸಿಗೆ ತನ್ನ ನಾಯನ್ನು ಕುರಿತು ಒಂದು ಹೊಸ ಭಯ ಹುಟ್ಟಿತು. "ನ್ಯಾನ್ಸಿಯ ಕೊಲೆ ಬಹಿರಂಗವಾಗಿ, ಕೊಂದವನು ನಾನೆಂದು ಸಂಶಯ ಹುಟ್ಟಿದ್ದರೆ, ನನ್ನ ವರ್ಣನೆಯನ್ನು ಲೋಕಕ್ಕೆ ತಿಳಿಸಿರುತ್ತಾರೆ. ನನ್ನ ವರ್ಣನೆಯ ಜೊತೆಯಲ್ಲೇ ನನ್ನ ನಾಯಿಯ ವರ್ಣನೆಯೂ ಇರುತ್ತದೆ. ಆದ್ದರಿಂದ, ಈ ನಾಯಿಯೊಡನೆ ಇದ್ದರೆ, ನನ್ನ ಗುರುತು ಬೇಗ ತಿಳಿದುಹೋಗುತ್ತದೆ" ಎಂದುಕೊಂಡು, "ಈ ನಾಯಿಯನ್ನು ನಾಶ ಮಾಡಿದರೆ ಮಾತ್ರ ನಾನು ಬದುಕಿಕೊಳ್ಳ ಬಹುದು" ಎಂದು ಸುತ್ತಲೂ ನೋಡಿದನು.

ಪಕ್ಕದಲ್ಲಿ ಒಂದು ನೀರಿನ ಹೊಂಡವಿತ್ತು. ಅದರಲ್ಲಿ ನಾಯಿಯನ್ನು ಮುಳುಗಿಸಿಬಿಡಬೇಕೆಂದು ನಿಶ್ಚಯಿಸಿ, ಸೈಕ್ಸ್ ತನ್ನ ಕುತ್ತಿಗೆಯ ವಸ್ತ್ರ ವನ್ನು ಬಿಚ್ಚಿ, ಅದರಲ್ಲಿ ಒಂದು ಭಾರವಾದ ಕಲ್ಲನ್ನು ಕಟ್ಟಿ, ಹೊಂಡದ ಹತ್ತಿರ ಹೋಗಿ, ನಾಯನ್ನು "ಬಾ, ಬಾ" ಎಂದು ಕರೆದ.

ನಾಯಿ ಸೈಕ್ಸಿನ ಚೇಷ್ಟೆಗಳನ್ನೆಲ್ಲಾ ನೋಡಿತು. ಅವನ ರೀತಿ ಎಂದಿನ ಹಾಗಿಲ್ಲ ಎಂಬುದನ್ನು ಕಂಡಿತು. ಅದಕ್ಕೆ ಅದೇನು ಭಯ



"ಸೈಕ್ಸ್ ನಾಯನ್ನು ಕರೆದ"

ವಾಯಿತೋ ಏನೋ, ನಿಂತ ಕಡೆಯೇ ನಿಂತು ಬಾಲವಾಡಿಸಿತು. "ಇಲ್ಲಿ ಬಾ" ಎಂದು ಸೈಕ್ಸ್ ಗರ್ಜಿಸಿದ. ನಾಯಿ ಅಭ್ಯಾಸಬಲದಿಂದ ಅವನು ಆಜ್ಞೆಮಾಡಿದ ಒಡನೆಯೆ ಹತ್ತಿರ ಬಂತು. ಅದರ ಕುತ್ತಿಗೆಗೆ ಕಲ್ಲು ಕಟ್ಟಬೇಕೆಂದು ಸೈಕ್ಸ್ ವಸ್ತ್ರವನ್ನು ಎತ್ತಿದೊಡನೆ ನಾಯಿ, ಹೆದರಿಕೆಯಿಂದ ಬಗುಳುತ್ತ ಎರಡು ಹೆಜ್ಜೆ ಹಿಂದೆ ಹಾರಿತು. ಸೈಕ್ಸ್ ಪುನಃ ಗರ್ಜಿಸಿದ.

ನಾಯಿ ಮತ್ತೆ ಮುಂದೆ ಬರಲಿಲ್ಲ. ಅರ್ಧಕ್ಷಣ ಸೈಕ್ಸಿನ ಮುಖ ನೋಡಿತು, ಒಂದು ಹೆಜ್ಜೆ ಮುಂದಿಕ್ಕಿತು, ಎರಡು ಹೆಜ್ಜೆ ಹಿಂದಿಕ್ಕಿತು, ಇದ್ದಕ್ಕಿದ್ದಂತೆ ಹೇಳದೆ ಕೇಳದೆ ಬೆನ್ನು ತಿರುಗಿಸಿ ಪರಾರಿಯಾಯಿತು.

ಸೈಕ್ಸ್ ಎಷ್ಟೋ ಕೂಗಿದ, ಸಿಳ್ಳು ಹಾಕಿದ, ಹಿಂದಿರುಗಿ ಬಂದೀತೋ ಏನೋ ಎಂದು ಕಾದು ಕುಳಿತ. ಹಗಲು ನೆತ್ತಿಗೇರಿತಾದರೂ ನಾಯಿಯ ನೆರಳು ಕೂಡ ಕಾಣಲಿಲ್ಲ. ಸೈಕ್ಸ್, ಬೇರೆ ಉಪಾಯ ಕಾಣದೆ, ಲಂಡನ್ನಿನ ದಾರಿಯಲ್ಲಿ ಮುಂದೆ ಹೋದನು.

ಲಂಡನ್ ನದಿಯ ದಡದಲ್ಲಿ ಸಾವಿರಾರು ಮುರುಕಲು ಕಟ್ಟಡಗಳು ಇದ್ದವು. ಅವು ಜನರ ವಾಸಕ್ಕೆ ಯೋಗ್ಯವಾಗಿರಲಿಲ್ಲ. ಹೊಗೆ, ದೂಳು, ಕೊಳೆ ತುಂಬಿಕೊಂಡು ಕೊಚ್ಚೆಕೊಚ್ಚೆಯಾಗಿತ್ತು. ಅಂತಹ ಸ್ಥಳ ಒಂದಿದೆ ಯೆಂಬುದು ಲಂಡನ್ನಿನಲ್ಲೇ ಅನೇಕರಿಗೆ ತಿಳಿಯದು. ನಗರದಲ್ಲಿ ವಾಸ ಮಾಡಲಾರದ ಕಡುಬಡವರನೇಕರು ಅಲ್ಲಿ ಮನೆಮಾಡಿಕೊಂಡಿದ್ದರು. ಕೊಲೆ ಕಳ್ಳತನ ಮುಂತಾದ ಮಹಾಪರಾಧಗಳನ್ನು ಮಾಡಿ ಪೋಲೀಸಿನವರ ಕೈಯಿಂದ ತಪ್ಪಿಸಿಕೊಳ್ಳಬೇಕೆಂಬವರು ಅಲ್ಲಿ ಬಂದು ತಲೆಮರೆಸಿಕೊಳ್ಳು ತ್ತಿದ್ದರು. ಲಂಡನ್ನಿಗೆ ಹಿಂದಿರುಗಬೇಕೆಂದು ಉದ್ದೇಶಿಸಿದ್ದ ಸೈಕ್ಸ್ ಆದರೂ ಈ ಬಿಲಗುಹೆಗಳಲ್ಲೇ ಅವಿತುಕೊಳ್ಳಬೇಕೆಂದು ಬರುತ್ತಿದ್ದ.

ಈ ಪ್ರಾಂತದ ಒಂದು ಮುರುಕಲು ಮಹಡಿಯ ಮೇಲೆ ಮೂರು ಜನ ಕಳ್ಳರು ಸೇರಿ, ಸೈಕ್ಸಿನ ವಿಷಯವನ್ನೇ ಚರ್ಚೆಮಾಡುತ್ತಿದ್ದರು. ಆ ವೇಳೆಗೆ ಸೈಕ್ಸ್ ನ್ಯಾನ್ಸಿಯನ್ನು ಕೊಲೆಮಾಡಿದ ಸಂಗತಿ ರಟ್ಟಾಗಿತ್ತು. ಸೈಕ್ಸ್ ಎಲ್ಲಿಗೆ ಹೋದನೋ, ಇಲ್ಲಿಗೆ ಬಂದರೆ ಏನು ಗತಿ ಎಂದು ಅವರು ಮಾತನಾಡಿಕೊಳ್ಳುತ್ತಿರುವಾಗ, ಮೆಟ್ಟಿಲುಗಳ ಮೇಲೆ ಏನೋ ಪಟಪಟ ಹೆಜ್ಜೆಯ ಶಬ್ದವಾಗಿ, ಸೈಕ್ಸಿನ ನಾಯಿ ಅವರಿದ್ದ ಕೊಟಡಿಯೊಳಕ್ಕೆ ನುಗ್ಗಿ ಬಂತು. ಹಾಗೆ ನುಗ್ಗಿ ಬಂದುದು ನಾಯಿ ಎಂಬುದು ತಿಳಿಯುವುದರೊಳ

ಗಾಗಿ ಮೊದಲೇ ಭಯಗ್ರಸ್ತರಾಗಿದ್ದ ಆ ಕಳ್ಳರು ಮತ್ತೂ ಭೀತಿಗೊಂಡು ಕೊಟಡಿಯಿಂದ ಮೆಟ್ಟಲು ಇಳಿದು, ಬೀದಿಗೆ ಓಡಿಬಂದರು.

ಬೀದಿಯಲ್ಲಿ ಚಳಿಗಾಳಿ ಮುಖದ ಮೇಲೆ ಬೀಸಿ, ಅವರ ಭಯ ಸ್ವಲ್ಪ ಶಾಂತವಾದಾಗ, ಅವರು ಪುನಃ ಮೆಟ್ಟಲು ಹತ್ತಿ ಕೊಟಡಿಗೆ ಬಂದು, ನೋಡಿದರು. ನಾಯಿ ಒಂದು ಮೂಲೆಯಲ್ಲಿ ಕುರ್ಚಿಯ ಕೆಳಗೆ ಮುದುರಿ ಕೊಂಡು ಮಲಗಿತ್ತು.

ನಾಯಿ ಬಂದ ಹಾಗೆಯೇ ಸೈಕ್ಸ್ ಕೂಡ ಎಲ್ಲಿ ಬಂದಾನೋ ಎಂದು ಅವರಿಗೆ ಇನ್ನೂ ಕಳವಳವಿತ್ತು. ಆದರೆ ಅವರಲ್ಲೇ ಒಬ್ಬ "ಛೆ! ಇಲ್ಲಿಗೆ ಬರುವುದಕ್ಕೆ ಅವನಿಗೆ ಎಷ್ಟು ಧೈರ್ಯ? ನಾಯನ್ನು ಬಿಟ್ಟು, ಅವನು ದೇಶಾಂತರ ಓಡಿಹೋಗಿದ್ದಾನೆ" ಎಂದೆನ್ನಲು, ಉಳಿದವರಿಗೂ ಅದೇ ಸೂಕ್ತ ವಾಗಿ ಕಂಡಿತು. ಆದರೂ ಜೀವಕ್ಕೆ ಧೈರ್ಯವಿಲ್ಲ. ಕಿಟಕಿಗಳಿಗೂ ಬಾಗಿಲಿಗೂ ಬಲವಾಗಿ ಅಗುಳಿ ಬಿಗಿದು, ಮೇಜಿನ ಮೇಲೆ ಒಂದು ಮೇಣದಬತ್ತಿಯನ್ನು ಹತ್ತಿಸಿಟ್ಟು, ಆ ಬೆಳಕಿನ ಸುತ್ತಲೂ ಗುಂಪಾಗಿ ಕುಳಿತರು. ಎಲ್ಲಿ ಏನು ಕರಕ್ ಎಂದರೂ ಬೆಚ್ಚುತ್ತಿದ್ದರು.

ಹೀಗೆ ಸ್ವಲ್ಪ ಹೊತ್ತು ಒಬ್ಬರಿಗೊಬ್ಬರು ಧೈರ್ಯ ಹೇಳಿಕೊಡುತ್ತಾ ಕುಳಿತಿರಲು ಯಾರೋ ಕೆಳಗಿನ ಬಾಗಿಲು ತಟ್ಟಿದ ಹಾಗಾಯಿತು.

ಒಬ್ಬ ತನಗಿಲ್ಲದ ಧೈರ್ಯವನ್ನು ತಂದುಕೊಂಡು, "ನಮ್ಮ ಚಾರ್ಲಿ ಬೇಟ್ಸ್ ಇರಬೇಕು" ಎಂದ.

ಇನ್ನೊಬ್ಬ "ಛೆ! ಚಾರ್ಲಿ ಎಂದಿಗೂ ಹಾಗೆ ತಟ್ಟುವುದಿಲ್ಲ." ಎಂದವನೆ, ಕಿಟಕಿಯನ್ನು ಅರ್ಧ ತೆರೆದು, ಹೊರಗೆ ಇಣಿಕಿ ನೋಡಿದ. ಹೊರಗೆ ಇಣಿಕಿದೊಡನೆ ಅವನ ಇಡೀ ಮೈ ಥರಥರನೆ ಅದುರಿತು. ತಟ್ಟಿದ ವರು ಯಾರೆಂದು ಅವನು ಬಾಯಿ ಬಿಟ್ಟು ಹೇಳಬೇಕಾಗಿಯೇ ಇರಲಿಲ್ಲ. ಅವನ ಮುಖ ನೋಡಿದರೇ ಗೊತ್ತಾಗುತ್ತಿತ್ತು. ನಾಯಿ ಕೂಡ ನಡುನಡುಗಿ ಕುಂಯಿಗುಡುತ್ತ ಬಾಗಿಲಿಂದ ದೂರವಾಗಿ ಸರಿಯಿತು.

ಬಾಗಿಲು ತಟ್ಟುವ ಶಬ್ದ ಇನ್ನೂ ಕೇಳಿಸುತ್ತಿತ್ತು. ಒಳಗಿದ್ದವರಿಗೆ ಬಾಗಿಲು ತೆರೆಯುವ ಧೈರ್ಯವಿಲ್ಲ, ತೆರೆಯದೆ ಸುಮ್ಮನೆ ಇರುವುದಕ್ಕೂ ಧೈರ್ಯವಿಲ್ಲ. ಕೊನೆಗೆ ಒಬ್ಬ ತನ್ನ ನಡುಗುವ ಕಾಲುಗಳನ್ನು ಎಳೆದ, ಕೊಂಡು ಹೋಗಿ, ಬಾಗಿಲು ತೆಗೆದ.

ಒಳಕ್ಕೆ ಬಂದವನ ಮುಖದ ಕೆಳಭಾಗ ಒಂದು ವಸ್ತ್ರದಲ್ಲಿ ಮುಚ್ಚಿ ಹೋಗಿತ್ತು. ಮೇಲುಭಾಗ ಕಾಣದಂತೆ ಟೋಪಿಯನ್ನು ಕೆಳಗೆಳೆದು ಕೊಂಡಿದ್ದ. ಕೊಟಡಿಗೆ ಬಂದ ಮೇಲೆ ಟೋಪಿಯನ್ನು ಕಿತ್ತೆಸೆದು, ಮುಖಕ್ಕೆ ಮುಚ್ಚಿಕೊಂಡಿದ್ದ ವಸ್ತ್ರವನ್ನೂ ತೆಗೆದ. ರಕ್ತಹೀನವಾದ ಮುಖ, ಗುಳಿ ಬಿದ್ದ ಕಣ್ಣು, ಬತ್ತಿದಕೆನ್ನೆ, ಮೂರು ದಿನದ ಗಡ್ಡ, ಮುಖದ ತುಂಬ ದೂಳು, ಕಷ್ಟದಿಂದ ಬಿಡುವ ಮೇಲುಸಿರು—"ಇವನು ಸೈಕ್ಸೇ" ಎನ್ನುವ ಹಾಗಿತ್ತು.

ಸೈಕ್ಸ್ ಬೇರೆ ಯಾರಾದರೂ ಇರುವರೋ ಎಂದು ಕೊಟಡಿಯ ಸುತ್ತಲೂ ಕಣ್ಣು ಓಡಿಸಿದ. ನಾಯಿ ಕಾಣಿಸಿತು.

"ಇದು ಹೇಗೆ ಬಂತಿಲ್ಲಿ?" ಎಂದು ಭಯದಿಂದ ಕಣ್ಣರಳಿಸಿ ಕೇಳಿದ.

"ಇದು ಈಗ ಮೂರು ಗಂಟೆಯ ಹಿಂದೆ ಒಂಟಿಯಾಗಿ ಬಂತು" ಎಂದು ಒಬ್ಬ ಕಳ್ಳನೆಂದ.

"ಫ್ಯಾಗಿನ್ನನ್ನು ಈ ದಿವಸ ಸೆರೆಹಿಡಿದರೆಂಬ ವರ್ತಮಾನ ಓದಿದೆ. ನಿಜವೆ?" ಎಂದ ಸೈಕ್ಸ್.

ಕಳ್ಳರು ಹೌದೆಂದರು. ಸೈಕ್ಸ್ ಅವರ ಮುಖಗಳನ್ನು ಒಂದೊಂದಾಗಿ ದಿಟ್ಟಿಸಿ, "ಫ್ಯಾಗಿನ್ನನ್ನು ಪೋಲೀಸಿನವರಿಗೆ ಒಪ್ಪಿಸಿದಂತೆ ನನ್ನನ್ನೂ ಒಪ್ಪಿಸಿಬಿಡುವಿರೊ? ಅಥವಾ ನಾನು ಇಲ್ಲಿ ನಿಶ್ಚಿಂತೆಯಿಂದ ಅವಿತುಕೊಳ್ಳ ಬಹುದೊ?" ಎಂದು ಸೈಕ್ಸ್ ಕೇಳಿದ.

ಕಳ್ಳರು ಒಬ್ಬರ ಮುಖ ಒಬ್ಬರು ನೋಡಿಕೊಂಡು, "ಇದೇ ಕ್ಷೇಮವಾದ ಸ್ಥಳವೆಂದು ನಿನಗೆ ತೋಚಿದರೆ, ನೀನು ಇಲ್ಲಿ ನಿಲ್ಲುವುದಕ್ಕೆ ನಮ್ಮದೇನೂ ಅಭ್ಯಂತರವಿಲ್ಲ" ಎಂದರು.

ಆ ವೇಳೆಗೆ ಸರಿಯಾಗಿ ಯಾರೋ ಕೊಟಡಿಯ ಬಾಗಿಲನ್ನು ತಟ್ಟಿದರು. ಕಳ್ಳರು 'ಹೆದರಬೇಕಾದ್ದು ಏನೂ ಇಲ್ಲ' ಎಂದು ಅವನಿಗೆ ಸಂಜ್ಞೆ ಮಾಡಿ, ಮೆಲ್ಲಗೆ ಬಾಗಿಲು ತೆರೆದರು. ಚಾರ್ಲಿ ಬೇಟ್ಸ್ ಕೊಟಡಿಯೊಳಕ್ಕೆ ನುಸುಳಿ ಬಂದ. ಬಂದವನೇ, ಬಾಗಿಲ ಎದುರಿಗೆ ಗೋಡೆಯನ್ನು ಒರಗಿಕೊಂಡು ನಿಂತಿದ್ದ ಸೈಕ್ಸನ್ನು ನೋಡಿ, ದೊಡ್ಡದಾಗಿ ಕಣ್ಣು ಬಾಯಿ ಬಿಟ್ಟು, "ಆ! ಯಾರು? ಸೈಕ್ಸೇ?" ಎಂದ.

ಸೈಕ್ಸ್ ಒಂದು ಹೆಜ್ಜೆ ಮುಂದೆ ಬಂದು, "ಇದೇಕೆ, ಚಾರ್ಲಿ? ಹೀಗೆ ಹೆದರುತ್ತೀಯೆ?" ಎಂದ.

ಚಾರ್ಲಿ ಹಿಮ್ಮೆಟ್ಟಿ, "ನಿಲ್ಲಲ್ಲೆ! ನೀನು ಮನುಷ್ಯನಲ್ಲ, ಪಿಶಾಚಿ!" ಎಂದು, ಮುಚ್ಚಿದ ಬಾಗಿಲನ್ನು ನೋಡಿ, "ಬಾಗಿಲು ತೆರೆಯಿರಿ. ನಾನು ಇಲ್ಲಿ ನಿಲ್ಲಲಾರೆ!" ಎಂದ.

ಬಾಗಿಲು ಮುಚ್ಚಿದ ಕಳ್ಳರು ಸೈಕ್ಸಿನ ಮುಖಮುಖ ನೋಡಿದರು. ಚಾರ್ಲಿ ಆವೇಶಗೊಂಡವನಹಾಗೆ ಕೂಗುತ್ತ, "ಅವನ ಮುಖ ಏನು ನೋಡುತ್ತೀರಿ? ನನ್ನಾಣೆ, ಇವನನ್ನು ನಾನೇ ಪೋಲೀಸಿನವರಿಗೆ ಒಪ್ಪಿಸಿಕೊಡುತ್ತೇನೆ. ಮೂರು ಜನ ಗಂಡಸರು ನಿಂತು ಒಬ್ಬನಿಗೆ ಹೆದರಿಕೊಂಡಿದ್ದೀರಾ? ನಿಮಗೆ ಧೈರ್ಯವಿಲ್ಲದಿದ್ದರೆ ನಾನೇ ಇವನಿಗೆ ಗತಿ ಕಾಣಿಸುತ್ತೇನೆ?" ಎಂದು ಮುಷ್ಟಿಗಳನ್ನು ಬಿಗಿದು, "ಅಯ್ಯೊಯ್ಯೋ! ಕೊಲೆ! ಕೊಲೆ!" ಎಂದು ಕೂಗಿಕೊಳ್ಳುತ್ತ, ಸೈಕ್ಸಿನ ಮೇಲೆ ಹಾರಿ ಅವನನ್ನು ನೆಲಕ್ಕೆ ಕೆಡವಿದ.

ಸೈಕ್ಸ್ ಆ ಹುಡುಗನಿಗಿಂತ ಹತ್ತರಷ್ಟು ಬಲಶಾಲಿಯಾದರೂ, ಹುಡುಗ ನೆಗೆದ ಜೋರಿಗೆ ತತ್ತರಿಸಿಬಿದ್ದ. ಅಲ್ಲಿದ್ದ ಮೂವರೂ ಅವರ ನಡುವೆ ಹೋಗದೆ ತಟಸ್ಥರಾಗಿ ಬೆಪ್ಪರಂತೆ ಬಿರುಗಣ್ಣು ಬಿಟ್ಟು ನಿಂತುಕೊಂಡಿದ್ದರು. ಆದ್ದರಿಂದ ಸೈಕ್ಸ್ ಬಹು ಬೇಗನೆ ಚಾರ್ಲಿಯನ್ನು ಹಿಡಿದು ನೆಲಕ್ಕೆ ಅದುಮಿ ಅವನ ಮುಖವನ್ನು ಚೆನ್ನಾಗಿ ಗುದ್ದಿದ.

ಆದರೆ ಆ ವೇಳೆಗಾಗಲೆ ಚಾರ್ಲಿಯ ಆರ್ತನಾದ ಅಕ್ಕಪಕ್ಕದ ಮನೆಗಳಿಗೂ -ಕೆಳಗಿನ ಬೀದಿಗೂ ಕೇಳಿಸಿ, ಜನ ಕುತೂಹಲದಿಂದ ಬಂದು ಸೇರಿದರು. ಕ್ಷಣಕ್ಷಣಕ್ಕೂ ಜನಸಂದಣಿ ಹೆಚ್ಚಾಗುತ್ತಿದ್ದುದನ್ನು ಮೇಲಿನಿಂದ ಕಳ್ಳರು ಕಂಡು, ಚಾರ್ಲಿಯ ಕುತ್ತಿಗೆಗೆ ಕೈಹಾಕಿದ್ದ ಸೈಕ್ಸನ್ನು ಎಚ್ಚರಿಸಿದರು. ಸೈಕ್ಸ್ ಚಾರ್ಲಿಯ ಗಂಟಲಿನ ಹಿಡಿತವನ್ನು ಸ್ವಲ್ಪ ಸಡಿಲಿಸಿ, ಎದ್ದು ನೋಡಿದ. ಕೆಳಗಡೆ ನೂರಾರು ಜನ ಪಂಜುಗಳನ್ನು ಹಿಡಿದುಕೊಂಡು ಬಂದು ನೆರೆದಿದ್ದರು.

ಗಂಟಲಿನ ಹಿಡಿತ ಸಡಿಲವಾದೊಡನೆ ಚಾರ್ಲಿ ಸೈಕ್ಸಿನ ಅಡಿಯಿಂದ ನುಣುಚಿಕೊಂಡು, ಕಿಟಕಿಯ ಹತ್ತಿರ ಓಡಿ, "ಸೈಕ್ಸ್ ಇದ್ದಾನೆ! ಬನ್ನಿ!" ಎಂದು ಕೂಗಿಕೊಂಡ.

ಸೈಕ್ಸ್ ಅವನನ್ನು ಅಟ್ಟಿಸಿಕೊಂಡು ಹೋಗಿ ಪುನಃ ಎಳೆದು ಹಿಡಿಯುವುದರೊಳಗಾಗಿ ಬೀದಿಯಲ್ಲಿದ್ದ ಜನ ಮನೆಯೊಳಕ್ಕೆ ನುಗ್ಗಿ, ಮೆಟ್ಟಲು ಹತ್ತಿ, ಕೊಟಡಿಯ ಬಾಗಿಲನ್ನು ಒಡೆಯಲು ಹೊಡೆದರು.

"ಇರಲಿ, ಇರಲಿ. ನೀವು ನನ್ನನ್ನು ಹಿಡಿದಾಗ ನೋಡೋಣ" ಎಂದು ಸೈಕ್ಸ್ ಚಾರ್ಲಿಯನ್ನು ಪಕ್ಕದ ಒಂದು ಸಣ್ಣ ಕೋಣೆಗೆ ತಳ್ಳಿ, ಬೀಗ ಹಾಕಿ, ಕಿಟಕಿಯಿಂದ ಕೆಳಗೆ ನೋಡಿದ.

ಅವನ ಮುಖವನ್ನು ಕಂಡೊಡನೆಯೆ ಕೆಳಗಿನ ಜನ ಒಂದೇ ಕಂಠದಿಂದ ತನ್ನ ರೋಷವನ್ನು ವ್ಯಕ್ತಪಡಿಸಿತು. "ಬಾಗಿಲು ಮುರಿಯಿರಿ" ಎಂದು ಕೆಲವರು ಕೂಗಿದರು. "ಏಣಿ ತಂದು ಹತ್ತಿ, ಅವನನ್ನು ಹಿಡಿಯಿರಿ" ಎಂದು ಕೂಗಿದರು. "ಗುಂಡಿನಿಂದ ಹೊಡೆದು ಕೊಂದುಬಿಡಿ" ಎಂದು ಕೆಲವರು ಕೂಗಿದರು. ಇನ್ನು ಕೆಲವರು "ಮನೆಗೆ ಬೆಂಕಿ ಹಾಕಿಬಿಡಿ" ಎಂದರು.

ಸೈಕ್ಸ್ ಕೊಟಡಿಯೊಳಕ್ಕೆ ಬಂದು, "ಹೊರಗಿನ ಹೊಳೆಯಲ್ಲಿ ನಾನು ಬರುವಾಗ ನೀರಿನ ಉಬ್ಬರವಿತ್ತು. ಈಗ ನೀರು ಇಳಿದುಹೋಗಿದೆ.

ದಡದಲ್ಲಿ ಮನೆಯ ಕೆಳಗೆ ಕೆಸರು ತುಂಬ ನಿಂತಿದೆ. ಆದರೂ ತಪ್ಪಿಸಿಕೊಳ್ಳ ಬಹುದು. ಎಲ್ಲಿ, ಒಂದು ಉದ್ದವಾದ ಹಗ್ಗ ಎಲ್ಲಿದೆ, ಹೇಳಿ. ಜನ ಎಲ್ಲಾ ಈ ಕಡೆ ಗುಂಪಾಗಿ ಸೇರಿದ್ದಾರೆ. ನಾನು ಆ ಕಡೆ ಹಗ್ಗದ ಸಹಾಯದಿಂದ ಹೊಳೆಗೆ ಇಳಿದು ಹೋಗುತ್ತೇನೆ. ಹಗ್ಗ ಕೊಡಿ" ಎಂದ.

ಕಳ್ಳರು ಹಗ್ಗಗಳ ಒಂದು ರಾಶಿಯನ್ನೇ ಅವನ ಮುಂದೆ ತಂದಿಟ್ಟರು. ಅದರಲ್ಲಿ ಒಂದು ಬಲವಾದ ಹಗ್ಗವನ್ನು ಆರಿಸಿಕೊಂಡು, ಸೈಕ್ಸ್ ಅದರ ಉದ್ದವನ್ನು ನೋಡಿದ. ಅಷ್ಟು ಸಾಕು ಎನ್ನಿಸಿತು. ಹಗ್ಗವನ್ನು ಸುರುಳಿ ಮಾಡಿಕೊಂಡು, ಜನರ ಎದುರಿಗಿದ್ದ ಕಿಟಕಿಯನ್ನು ಬಿಟ್ಟು, ಇನ್ನೊಂದು ಕಿಟಕಿಯ ಮೂಲಕ ಮನೆಯ ಸೂರಿನ ಮೇಲೆ ಏರಿದ. ಸೂರಿನ ಮೇಲಿದ್ದ ಒಂದು ಮಸಿಕೊಳವೆಗೆ ಆ ಹಗ್ಗದ ಒಂದು ತುದಿಯನ್ನು ಬಲವಾಗಿ ಬಿಗಿದ. ಜೇಬಿನಿಂದ ಒಂದು ಚಾಕುವನ್ನು ತೆಗೆದು, ಅದನ್ನು ಬಿಚ್ಚಿ ಹಿಡಿದುಕೊಂಡು, "ಈ ಹಗ್ಗ ಇರುವಷ್ಟು ಉದ್ದ ಇದರ ಮೂಲಕ ಇಳಿದು, ಅನಂತರ ಕೆಳಗೆ ದುಮುಕಿ ಪಾರಾಗಿ ಹೋಗುತ್ತೇನೆ. ಯಾರಾದರೂ ತಡೆಯುವುದಕ್ಕೆ ಬಂದರೆ ಈ ಚಾಕುವಿನಿಂದ ಅವರನ್ನು ತೀರಿಸಿಬಿಡುತ್ತೇನೆ" ಎಂದುಕೊಂಡ.

ಆದರೆ ಸೈಕ್ಸ್ ಈಚೆ ಜನರ ಎದುರಿನ ಕಿಟಕಿಯನ್ನು ಬಿಟ್ಟು ಆಚೆಯ ಕಿಟಕಿಯ ಮೂಲಕ ಹೋದುದು ಜನರ ಕಣ್ಣಿಗೆ ಕಾಣಿಸದಿರಲಿಲ್ಲ. ಅವನನ್ನು ಕಂಡೊಡನೆ, ಅವನೇನು ಮಾಡುವನೋ ಎಂಬ ಕುತೂಹಲ ದಿಂದ ಜನರ ಗುಂಪು ಒಂದು ಕ್ಷಣ ಸ್ತಬ್ಧವಾಗಿತ್ತು. ಆದರೆ ಅವನು ಹಗ್ಗದ ಒಂದು ಕೊನೆಯನ್ನು ಮಸಿಕೊಳವೆಗೆ ಕಟ್ಟಿದೊಡನೆಯೇ ಅವನ ಉಪಾಯ ಅರ್ಥವಾಗಿ, "ಹೋಹೋ! ಹೊಳೆಯಲ್ಲಿ ತಪ್ಪಿಸಿಕೊಳ್ಳುತ್ತಾನೆ. ಹಿಡಿಯಿರಿ, ಹಿಡಿಯಿರಿ!" ಎಂದು ಆವೇಶದಿಂದ ಕೂಗಿಕೊಂಡರು.

ಆ ಜನರ ರೋಷದ ಕೂಗನ್ನು ಕೇಳಿ ಸೈಕ್ಸಿನ ಧೈರ್ಯ ಕೂಡ ಕರಗಿ ನೀರಾಗಿಹೋಯಿತು. ಕಾಲು ಕೈಗಳಲ್ಲಿ ನಡುಕ ಕಾಣಿಸಿಕೊಂಡಿತು.

ಹಾಗೇ ನಡುಗುವ ಕೈಗಳಲ್ಲೇ ಹಗ್ಗದಲ್ಲಿ ಒಂದು ನುಣಿಗಂಟು ಹಾಕಿದ. ಅದನ್ನು ಸೊಂಟಕ್ಕೆ ಬಿಗಿದುಕೊಳ್ಳಬೇಕೆಂದು ತಲೆಯ ಹತ್ತಿರ ತಂದ. ಏಕೋ ಏನೋ ಕಾಲು ಜಾರಿತು. ತಲೆಯ ಹತ್ತಿರ ತಂದ ಹಗ್ಗದ ನುಣಿ



"ಸೈಕ್ಸ್ ನೇಣುಬಿದ್ದ"

ಗಂಟು ಕುತ್ತಿಗೆಗೆ ಬಿತ್ತು. ಜಾರಿಬಿದ್ದ ಸೈಕ್ಸಿನ ಸ್ವಂತ ಭಾರದಿಂದಲೇ ಅವನು ಅದೇ ಕ್ಷಣವೇ ನೇಣುಬಿದ್ದ. ಜನ ನೋಡುತ್ತಿದ್ದ ಹಾಗೆಯೇ ಅದೇ ಹಗ್ಗದ ತುದಿಯಲ್ಲಿ ಅಲ್ಲೇ ಸತ್ತ.

ಸೈಕ್ಸಿನ ನಾಯಿ ಅವನು ಸೂರಿನ ಮೇಲೆ ಹತ್ತಿದಾಗ ತಾನೂ ಹಿಂದೆಯೇ ಹತ್ತಿಬಂತು. ಅವನು ಹಗ್ಗದೊಡನೆ ಆಡುತ್ತಿದ್ದ ಆಟವನ್ನೆಲ್ಲಾ ನೋಡಿತು. ಯಾವಾಗ ಹಗ್ಗದ ತುದಿಯಲ್ಲಿ ಅವನ ದೇಹ ಅಂತರಾಳಕ್ಕೆ ನೆಗೆಯಿತೋ, ಅದೇ ಕ್ಷಣದಲ್ಲಿ ನಾಯಿ ತಾನೂ ಅವನ ಹಿಂದೆ ನೆಗೆಯಿತು. ಆದರೆ ಆಯ ತಪ್ಪಿ, ಕೆಳಗಿನ ಕಲ್ಲುನೆಲದ ಮೇಲೆ ಬಿದ್ದು ಅದರ ತಲೆ ಸೀಳಿ ಹೋಳಾಯಿತು.

## ಆಲಿವರನ ಅದೃಷ್ಟ

ಇತ್ತ, ರೋಸ್ ತಾನು ನ್ಯಾನ್ಸಿಯ ಬಾಯಿಂದ ಕೇಳಿದ ಕತೆಯ ನ್ನೆಲ್ಲಾ ಬ್ರೌನ್ಲೋಗೆ ಹೇಳಿ, ಅವನ ಸಹಾಯವನ್ನು ಕೋರಿದಳಷ್ಟೆ. ಬ್ರೌನ್ಲೊ ಆದರೂ ಹುಡುಗನ ಮೇಲೆ ಅಪಾರವಾದ ಕನಿಕರವನ್ನು ತೋರಿ, ಅವಳಿಗೆ ತನ್ನ ಸಹಕಾರವನ್ನು ನೀಡಿದ. ಮಂಕ್ಸ್ ಯಾರು, ಅವನ ನಿಜವಾದ ಹೆಸರೇನು, ಅವನಿಗೂ ಆಲಿವರನಿಗೂ ಏನು ಸಂಬಂಧ, ಆಲಿವರನ ನಾಶನದಲ್ಲಿ ಅವನಿಗೇಕೆ ಅಷ್ಟು ಆಸಕ್ತಿ– ಇವುಗಳನ್ನೆಲ್ಲಾ ಕೂಲಂಕಷವಾಗಿ ವಿಚಾರಿಸಿ ತಿಳಿಯಬೇಕೆಂದು ನಿಶ್ಚಯಿಸಿದ. ಆ ಕಾರ್ಯದಲ್ಲಿ ಅವನ ಸ್ನೇಹಿತ ಗ್ರಿಮ್‌ವಿಗ್ಗನೂ ಮಿಸೆಸ್ ಮೆಯ್ಲಿಯೂ ತಮ್ಮ ಕೈಲಾದ ಸಹಾಯ ಮಾಡಲು ಒಪ್ಪಿದರು.

ಅನೇಕ ದಿನಗಳು ಅನ್ವೇಷಣೆ ನಡೆದ ಮೇಲೆ, ಒಂದು ದಿನ ಸಂಜೆ ಬ್ರೌನ್ಲೋವಿನ ಮನೆಯ ಮುಂದೆ ಒಂದು ಕುದುರೆಗಾಡಿ ಬಂದು ನಿಂತಿತು. ಅದರೊಳಗಿನಿಂದ ಬ್ರೌನ್ಲೊ ಇಳಿದು ಮನೆಯೊಳಕ್ಕೆ ಬಂದ. ಅವನ ಹಿಂದೆ

ಇಬ್ಬರು ದೃಢಾಂಗರೂ ಅವರ ನಡುವೆ ಒಬ್ಬ ಮಧ್ಯವಯಸ್ಸಿನವನೂ ಬಂದರು.

ಮನೆಯೊಳಕ್ಕೆ ಬಂದ ಮೇಲೆ ಬ್ರೌನ್ಲೊ ಆ ಮಧ್ಯವಯಸ್ಸಿನವನನ್ನು ಒಂದು ಕೋಣೆಯೊಳಕ್ಕೆ ಕರೆದು, ಅವನ ಆಚೆ ಈಚೆ ನಿಂತಿದ್ದ ಇಬ್ಬರು ದೃಢಾಂಗರನ್ನು ಕುರಿತು "ಇವನೇನಾದರೂ ತಂಟೆ ಮಾಡಿದರೆ, ಇವನನ್ನು ಬೀದಿಗೆಳೆದುಕೊಂಡು ಹೋಗಿ, ಪೋಲೀಸಿನವರ ವಶಕ್ಕೆ ಒಪ್ಪಿಸಿಬಿಡಿ" ಎಂದನು.

ಅದಕ್ಕೆ ಅವನು "ನಾಲಿಗೆ ಹಿಡಿದು ಮಾತನಾಡು. ನಾನು ಯಾರು ಗೊತ್ತೊ?" ಎಂದನು.

ಅದಕ್ಕೆ ಬ್ರೌನ್ಲೊ "ನೀನು ಯಾರೆಂಬುದು ನನಗೆ ಗೊತ್ತು. ನೀನು ಫ್ಯಾಗಿನ್ನಿನ ಸಹವಾಸದಲ್ಲಿದ್ದ ಮಂಕ್ಸ್. ಅದು ನಿನ್ನ ನಿಜವಾದ ಹೆಸರಲ್ಲ. ನೀನು ಆಲಿವರ್ ಟ್ವಿಸ್ಟಿಗೆ ಮಲಅಣ್ಣನಾಗಬೇಕು. ಫ್ಯಾಗಿನ್ನಿನ ಸಹಾಯದಿಂದ ಆಲಿವರನ್ನು ನಾಶಮಾಡಲು ನೀನು ಯತ್ನಿಸುತ್ತಿದ್ದೀಯೆ. ನೀನು ಬೇಕಾದರೆ ಇಲ್ಲಿ ನಿಲ್ಲಬಹುದು, ಬೇಡವಾದರೆ ಹೊರಟುಹೋಗಬಹುದು. ಆದರೆ ನೀನು ಇಲ್ಲಿಂದ ಹೊರಟೊಡನೆಯೆ ಪೋಲೀಸರ ವಶವಾಗುವೆ. ಮೋಸ, ಕಳ್ಳತನ, ಕೊಲೆ ಇವು ನಿನ್ನ ಅಪರಾಧಗಳಾಗಿವೆ. ಗೊತ್ತೊ?" ಎಂದ.

ಮಂಕ್ಸಿನ ಮುಖದಲ್ಲಿ ರಕ್ತ ಇಂಗಿಹೋಯಿತು. ಅವನ ನಾಲಿಗೆ ಒಣಗಿತು. "ನನ್ನ ತಂದೆಗೆ ನೀನು ಅತ್ಯಂತ ಪ್ರಿಯ ಸ್ನೇಹಿತನೆಂದು ಸುಳ್ಳು ಹೇಳಿ, ನನ್ನನ್ನು ಹೀಗೆ ಮೋಸದಿಂದ ತೊಂದರೆಪಡಿಸುವುದು ಸರಿಯೆ?" ಎಂದ.

"ನಿನ್ನ ತಂದೆ ನನಗೆ ಅತ್ಯಂತ ಪ್ರಿಯ ಸ್ನೇಹಿತನಾಗಿದ್ದುದರಿಂದಲೇ ನಿನ್ನನ್ನು ಪೋಲೀಸರ ಹಿಡಿತದಿಂದ ತಪ್ಪಿಸಲು ನಾನು ಪ್ರಯತ್ನಿಸುತ್ತಿದ್ದೇನೆ. ನಿನ್ನ ತಂದೆಯ ತಂಗಿಯನ್ನು ನಾನು ಮದುವೆಯಾಗಬೇಕಾಗಿತ್ತು, ಆದರೆ

ಮದುವೆಯ ಬೆಳಗ್ಗೆ ಆಕೆ ತೀರಿಕೊಂಡಳು ಎಂಬುದನ್ನು ನೀನು ಅರಿಯೆ. ಅಂತಹ ನನ್ನ ಪ್ರಿಯ ಸ್ನೇಹಿತನ ಮನೆಯಲ್ಲಿ ನಿನ್ನಂತಹ ಮಗ ಹುಟ್ಟ ಬಹುದೆ?" ಎಂದು ಬ್ರೌನ್ಲೊ ವ್ಯಸನದಿಂದ ಹೇಳಿದ.

"ಈ ಹಳೆಯ ಪುರಾಣವನ್ನೆಲ್ಲ ಕಟ್ಟಿಕೊಂಡು ನನಗೆ ಏನಾಗ ಬೇಕು ?" ಎಂದು ಮಂಕ್ಸ್ ಸಿಡುಕಿದ.

"ಏನಾಗಬೇಕೋ ಹೇಳುತ್ತೇನೆ. ನಿನಗೊಬ್ಬ ತಮ್ಮನಿದ್ದಾನೆ ಅಲ್ಲವೆ ? ಅವನ ಹೆಸರನ್ನು ನಾನು ನಿನ್ನ ಕಿವಿಯಲ್ಲಿ ಪಿಸುಗುಟ್ಟಿದ್ದರಿಂದಲೇ ಅಲ್ಲವೆ, ನೀನು ಬಾಲ ಮುದುರಿಕೊಂಡ ನಾಯಿಯಂತೆ ನನ್ನ ಹಿಂದೆ ಇಲ್ಲಿಗೆ ಬಂದದ್ದು?" ಎಂದ ಬ್ರೌನ್ಲೊ.

"ತಮ್ಮನೂ ಇಲ್ಲ, ಗಿಮ್ಮನೂ ಇಲ್ಲ. ನನ್ನ ತಂದೆಗೆ ನಾನು ಒಬ್ಬನೇ ಮಗ" ಎಂದು ಮಂಕ್ಸ್ ಹಟ ಹಿಡಿದ.

"ನೀನು ಸುಳ್ಳು ಹೇಳಿಯೇ ಸಾಧಿಸಬೇಕೆಂದಿದ್ದೀಯೆ, ಅಲ್ಲವೆ ? ಹಾಗಾದರೆ, ಈ ಕತೆಯನ್ನು ಕೇಳು" ಎಂದು ಬ್ರೌನ್ಲೊ, ಅದುವರೆಗೆ ತಾನು ಮಾಡಿದ ಅನ್ವೇಷಣೆಗಳ ಫಲವನ್ನು ಮಂಕ್ಸಿಗೆ ಹೇಳಿದ :

"ಕೇಳು, ಮಂಕ್ಸ್. ನಿನ್ನ ತಂದೆ ನಿನ್ನ ತಾಯನ್ನು ಮದುವೆ ಮಾಡಿಕೊಂಡದ್ದು ಸಹಜವಾದ ಪ್ರೇಮದಿಂದಲ್ಲ. ಅವಳು ಅವನಿಗಿಂತ ಹತ್ತು ವರುಷ ದೊಡ್ಡವಳು. ಆದರೂ ತನ್ನ ಧನಾಢ್ಯನಾದ ಬಂಧು ವೊಬ್ಬನ ಬಲವಂತದಿಂದ, ಆತನ ತೃಪ್ತಿಗಾಗಿ ಅವಳನ್ನು ಮದುವೆಯಾದ. ಆದರೆ ಅವಳ ಸಿಡುಕೂ ಒರಟುತನವೂ ಕಾರಣವಾಗಿ ಅವರಿಬ್ಬರಿಗೂ ಅಗಲಿಕೆಯುಂಟಾಯಿತು. ಸ್ವಲ್ಪ ದಿನವಾಗುವುದರೊಳಗಾಗಿ ನಿನ್ನ ತಾಯಿ ಅವನನ್ನು ಮರೆತೇಬಿಟ್ಟಳು.

"ಈ ನಡುವೆ ನಿನ್ನ ತಂದೆಗೆ ಒಬ್ಬ ಆಪ್ತನಾದ ಸ್ನೇಹಿತ ಸಿಕ್ಕಿದ. ಆಗ ತಾನೆ ಆತನ ಪತ್ನಿ ಮರಣ ಹೊಂದಿದ್ದಳು. ಆತನಿಗೆ ಇಬ್ಬರು ಹೆಣ್ಣು ಮಕ್ಕಳು. ದೊಡ್ಡವಳಿಗೆ ಹತ್ತೊಂಬತ್ತು ವರುಷ, ಸಣ್ಣಮಗುವಿಗೆ ಎರಡು

ಮೂರು ವರುಷ. ಆ ಮಕ್ಕಳ ತಂದೆ ನಿನ್ನ ತಂದೆಯ ಸದ್ಗುಣಗಳಿಗೆ ಮನಸೋತು, ತನ್ನ ಹಿರಿಯ ಮಗಳನ್ನು ಅವನಿಗೆ ಮದುವೆ ಮಾಡಿ ಕೊಟ್ಟ.

"ಈ ನಡುವೆ, ಹಿಂದೆ ಯಾರನ್ನು ತೃಪ್ತಿಪಡಿಸುವುದಕ್ಕಾಗಿ ನಿನ್ನ ತಂದೆ ನಿನ್ನ ತಾಯಿಯನ್ನು ಮದುವೆಯಾಗಲು ಒಪ್ಪಿದನೋ ಆ ಧನಾಢ್ಯ ನಾದ ಬಂಧು 'ಅನ್ಯಾಯವಾಗಿ ಬಲವಂತದಿಂದ ಮದುವೆ ಮಾಡಿ, ಆ ಹುಡುಗನ ಬದುಕನ್ನು ಹಾಳುಮಾಡಿದೆನಲ್ಲ' ಎಂದು ಪಶ್ಚಾತ್ತಾಪಪಟ್ಟು, ಅದಕ್ಕೆ ಪ್ರಾಯಶ್ಚಿತ್ತವಾಗಿ ತನ್ನ ಆಸ್ತಿಯಲ್ಲಿ ಬಹು ಭಾಗವನ್ನು ಅವನ ಹೆಸರಿಗೆ ಬರೆದು, ಸತ್ತುಹೋದನು.

"ಆ ಸಮಯದಲ್ಲಿ ನಿನ್ನ ತಂದೆ ರೋಂ ನಗರಕ್ಕೆ ಹೋಗಿದ್ದ. ನಿನ್ನ ತಾಯಿ ಮಗುವಾದ ನಿನ್ನೊಡನೆ ಪ್ಯಾರಿಸ್ಸಿನಲ್ಲಿ ಇದ್ದಳು. ರೋಂ ನಗರ ದಲ್ಲಿ ನಿನ್ನ ತಂದೆ ಕಾಯಿಲೆ ಬಿದ್ದು, ಆ ಸಂಗತಿ ತಿಳಿದೊಡನೆ ನಿನ್ನ ತಾಯಿ ಅಲ್ಲಿಗೆ ಹೋದಳು. ಅವಳು ಬಂದ ಮಾರನೆಯ ದಿನವೇ ಅವನು ತೀರಿ ಕೊಂಡ. ಹಾಗಾಗಿ ಅವನ ಹೆಸರಿಗೆ ಬಂದ ಆಸ್ತಿಯೆಲ್ಲವೂ ನಿನ್ನ ತಾಯಿಯ ಪಾಲಿಗೂ ನಿನ್ನ ಪಾಲಿಗೂ ಬಂತು.

"ನಿನ್ನ ತಂದೆ ರೋಂ ನಗರಕ್ಕೆ ಹೋಗುವುದಕ್ಕೆ ಮುಂಚೆ ನನ್ನನ್ನು ಬಂದು ಕಂಡಿದ್ದ. ಅವನು ತನ್ನ ಎರಡನೆಯ ಹೆಂಡತಿಯ ಚಿತ್ರವನ್ನು ತಾನೇ ಬರೆದು, ಆ ಚಿತ್ರವನ್ನು ನನಗೆ ಕೊಟ್ಟುಹೋಗಲು ಬಂದಿದ್ದ. ಆಗ, ತನಗೆ ಹೊಸದಾಗಿ ಬಂದ ಆಸ್ತಿಯನ್ನು ತನ್ನ ಎರಡನೆಯ ಹೆಂಡತಿಯ ಹೆಸರಿಗೆ ಮಾಡಿ, ನಿನಗೂ ಸ್ವಲ್ಪ ಅದರಲ್ಲಿ ಭಾಗ ಕೊಡ ಬೇಕೆಂದು ಹೇಳಿದ. ಅದರ ವಿಚಾರವಾಗಿ ತಾನು ರೋಂ ನಗರದಿಂದ ಬರೆಯುವುದಾಗಿಯೂ ಹೇಳಿದ್ದ. ಆದರೆ ಅವನಿಂದ ನನಗೆ ಕಾಗದ ಏನೂ ಬರಲಿಲ್ಲ.

"ಅನಂತರ ಬಹುಕಾಲದವರೆಗೆ ಅವನ ಎರಡನೆಯ ಹೆಂಡತಿಯ ವಿಚಾರವಾಗಿ ನನಗೆ ಏನೂ ತಿಳಿದೇ ಬರಲಿಲ್ಲ.

"ಈಚೆಗೆ ಒಬ್ಬ ತಬ್ಬಲಿ ಹುಡುಗನಿಗೆ ನಾನು ಆಶ್ರಯಕೊಟ್ಟು, ಅವನ ಆರೈಕೆ ಮಾಡುತ್ತಿದ್ದಾಗ, ನನ್ನ ಸ್ನೇಹಿತ ನನಗೆ ಕೊಟ್ಟುಹೋದ ಅವನ ಎರಡನೆಯ ಹೆಂಡತಿಯ ಚಿತ್ರಕ್ಕೂ ಈ ಹುಡುಗನ ಮುಖಕ್ಕೂ ಇದ್ದ ತೀವ್ರವಾದ ಹೋಲಿಕೆಯನ್ನು ಕಂಡು, 'ಇದೇನು, ಇಂಥ ಹೋಲಿಕೆ?' ಎಂದುಕೊಳ್ಳುತ್ತಿರುವಾಗಲೇ ಅವನು ಪುನಃ ಫ್ಯಾಗಿನ್ನಿನ ಬಲೆಗೆ ಬಿದ್ದ.

"ಆಗ ನನಗೆ ನಿನ್ನ ನೆನಪಾಯಿತು. ನಿನ್ನ ತಾಯಿ ಸತ್ತು, ನೀನು ವೆಸ್ಟ್ ಇಂಡೀಸ್ ದ್ವೀಪದಲ್ಲಿ ತೋಟಮಾಡಿಕೊಂಡು ಇದ್ದೆಯೆಂದು ತಿಳಿದು ಬಂತು. ಒಡನೆಯೆ ಅಲ್ಲಿಗೆ ನಾನು ಹಡಗು ಹತ್ತಿ ಬಂದೆ. ಆದರೆ ನೀನು ಅನೇಕ ತಿಂಗಳುಗಳ ಮೊದಲೇ ವೆಸ್ಟ್ ಇಂಡೀಸ್ ದ್ವೀಪಗಳಿಂದ ಲಂಡನ್ನಿಗೆ ಹೋದೆಯೆಂದು ಹೇಳಿದರು. ಆದರೆ ನಿನ್ನ ಲಂಡನ್ನಿನ ವಿಳಾಸ ಯಾರಿಗೂ ತಿಳಿಯದು. ನಾನು ಮಾರನೆಯ ಹಡಗಿನಲ್ಲಿ ಲಂಡನ್ನಿಗೆ ಬಂದು, ನಿನಗಾಗಿ ಬೀದಿಬೀದಿಯಲ್ಲೂ ಹುಡುಕಾಡಿದೆ. ಇಷ್ಟು ದಿನ ಹುಡುಕಾಡಿದ್ದಕ್ಕೆ ಈ ಸಂಜೆ ನೀನು ಸಿಕ್ಕಿದೆ. ನಿನ್ನ ತಮ್ಮನ ಹೆಸರನ್ನು ಹೇಳಿದೊಡನೆ ನನ್ನ ಹಿಂದೆ ಬಂದೆ.

"ನಿನ್ನ ತಂದೆ ತಾನು ಸಾಯುವ ಮುಂಚೆ ಒಂದು ಮರಣಶಾಸನವನ್ನು ಬರೆದ. ಅದರಲ್ಲಿ ಅವನ ಎರಡನೆಯ ಹೆಂಡತಿಯ ಮಗುವಿನ ಸುದ್ದಿಯಿತ್ತು. ಆ ಮರಣಶಾಸನವನ್ನು ನಿನ್ನ ತಾಯಿ ನಾಶಮಾಡಿದಳು. ಇವೆಲ್ಲವೂ ನಿನಗೂ ಗೊತ್ತು.

"ನೀನು ಲಂಡನ್ನಿಗೆ ಬಂದಾಗ, ಈ ನಿನ್ನ ತಮ್ಮನನ್ನು ಅಕಸ್ಮಾತ್ತಾಗಿ ಕಂಡೆ. ಅವನ ಮುಖದಲ್ಲಿ ನಿನ್ನ ತಂದೆಯ ಹೋಲಿಕೆಯಿತ್ತು. ಆಗ ಅವನು ಹುಟ್ಟಿದುದು ಎಲ್ಲಿ ಎಂದು ವಿಚಾರಿಸಿಕೊಂಡು,

ಅವನು ಹುಟ್ಟಿದೂರಿಗೆ ಹೋಗಿ, ಅವನ ಜನನದ ಸಾಕ್ಷಿಪತ್ರಗಳನ್ನು ಪಡೆದುಕೊಂಡು, ಅವುಗಳನ್ನೂ ನಾಶಮಾಡಿದೆ.

"ಅನಂತರ ನೀನು ಫ್ಯಾಗಿನ್ನಿನ ಹತ್ತಿರ ಬಂದು, ಆಲಿವರನ್ನು ನಾಶಮಾಡಲು ಅವನಿಗೆ ಏನೇನು ಹೇಳಿದೆಯೋ ಅವರ ಪ್ರತಿಯೊಂದು ಅಕ್ಷರವೂ ನನಗೆ ಗೊತ್ತು. ಈ ನಿಮ್ಮ ರಹಸ್ಯವಾದ ಸಂಭಾಷಣೆ ನನಗೆ ಗೊತ್ತಾದುದರಿಂದಲೇ ನ್ಯಾನ್ಸಿಯ ಕೊಲೆಯೂ ನಡೆಯಿತು. ಆ ಕೊಲೆಯ ಹೊಣೆ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ನಿನ್ನ ತಲೆಯ ಮೇಲಿದೆ.

"ಇಷ್ಟಾದರೂ, ನೀನು ಇವನ್ನೆಲ್ಲಾ ಒಪ್ಪಿಕೊಳ್ಳುವುದಾದರೆ, ಈಗಲೂ ನೀನು ಮುಕ್ತನಾಗಿ ಹೋಗಬಹುದು."

ಹೀಗೆಂದು ಬ್ರೌನ್ಲೋ ಇಷ್ಟೆಲ್ಲಾ ಹೇಳುತ್ತಿರುವಾಗ ಮಂಕ್ಸ್ ತುಟಿ ತುಟಿ ಕಚ್ಚಿಕೊಳ್ಳುತ್ತ, ಕಾಲಿಂದ ನೆಲವನ್ನು ಕೆರೆಯುತ್ತ, ತಲೆ ತಗ್ಗಿಸಿ ಕೊಂಡು ಕುಳಿತಿದ್ದ. ತನ್ನ ಕತೆಯ ಪ್ರತಿಯೊಂದು ಹೆಜ್ಜೆಯನ್ನೂ ಬ್ರೌನ್ಲೋ ಗುರುತಿಸಿಕೊಂಡು ಬಂದಿದ್ದನೆಂದು ಅವನಿಗೆ ಎನ್ನಿಸಿತು. ಇಂಥವನ ಹಿಡಿತದಿಂದ ತಪ್ಪಿಸಿಕೊಳ್ಳಬೇಕಾದರೆ ಸತ್ಯವೊಂದೇ ನೇರವಾದ ಮಾರ್ಗ ಎನ್ನಿಸಿತು.

ಆ ವೇಳೆಗೆ ಬ್ರೌನ್ಲೋವಿನ ಸ್ನೇಹಿತನೊಬ್ಬನು ಓಡಿಬಂದು, "ಫ್ಯಾಗಿನ್ನನ್ನು ಈ ಬೆಳಗ್ಗೆ ಸೆರೆ ಹಿಡಿದರಂತೆ. ಸೈಕ್ಸನ್ನು ಈ ರಾತ್ರೆ ಸೆರೆ ಹಿಡಿಯುತ್ತಾರಂತೆ" ಎಂದು ಹೇಳಿದ.

ಅದನ್ನು ಕೇಳಿ ಮಂಕ್ಸಿನ ದಿಗಿಲು ಇನ್ನೂ ಹೆಚ್ಚಾಯಿತು. "ನೀನು ಹೇಳಿದ ಹಾಗೆ ಕೇಳುತ್ತೇನೆ. ನಡೆದುದನ್ನೆಲ್ಲಾ ನಿಜವಾಗಿ ಬರೆದು ಕೊಡುತ್ತೇನೆ. ನನ್ನ ತಂದೆ ತನ್ನ ಮರಣಶಾಸನದಲ್ಲಿ ಹೇಗೆ ಬರೆದಿದ್ದನೋ ಹಾಗೆ ಆಲಿವರನಿಗೆ ಆಸ್ತಿಯನ್ನು ಹಂಚಿಕೊಡುತ್ತೇನೆ. ಸದ್ಯಃ ನನ್ನನ್ನು

ನೀನು ಉಳಿಸಿದರೆ ಸಾಕು" ಎಂದು ಬ್ರೌನ್ಲೋವನ್ನು ಅವನು ಬೇಡಿಕೊಂಡನು.

"ಹಾಗಾದರೆ, ನೀನು ಇಲ್ಲಿಯೇ ಇರು. ನಿನ್ನನ್ನು ಸುರಕ್ಷಿತವಾಗಿ ನಿನ್ನ ಊರಿಗೆ ಕಳಿಸುವ ಭಾರ ನನಗಿರಲಿ" ಎಂದು ಬ್ರೌನ್ಲೊ ಅವನಿಗೆ ಅಭಯಕೊಟ್ಟನು.

ಅನಂತರ ಬ್ರೌನ್ಲೊ ಆಲಿವರನ್ನು ಕರೆದುಕೊಂಡು ಫ್ಯಾಗಿನ್ನನ್ನು ಹಿಡಿದು ಕೂಡಿಹಾಕಿದ್ದ ಸೆರೆಮನೆಗೆ ಹೋದನು. ಆಲಿವರನ ತಾಯಿತಂದೆ ಯಾರೆಂಬುದನ್ನು ಸ್ಥಿರಪಡಿಸುವ ಕೆಲವು ಸಾಕ್ಷಿಪತ್ರಗಳನ್ನು ಮಂಕ್ಸ್ ಫ್ಯಾಗಿನ್ನಿನ ಕೈಯಲ್ಲಿ ಕೊಟ್ಟಿದ್ದನೆಂಬುದು ಬ್ರೌನ್ಲೋವಿಗೆ ತಿಳಿದಿತ್ತು, ಆ ಪತ್ರಗಳನ್ನು ಸಾಧ್ಯವಾದರೆ ಪಡೆಯೋಣವೆಂದು ಅವನು ಆಲಿವರನ್ನು ಕರೆದುಕೊಂಡು ಸೆರೆಮನೆಗೆ ಹೋದ.

ಫ್ಯಾಗಿನ್ನನ್ನು ಸೆರೆಹಿಡಿದು ನ್ಯಾಯಾಸ್ಥಾನಕ್ಕೆ ತಂದು, ಅವನ ಮೇಲೆ ಕಳ್ಳತನ, ಮೋಸ, ಕೊಲೆ ಮೊದಲಾದ ಆರೋಪಗಳನ್ನು ಹೊರಿಸುವಾಗ ನೆಲದಿಂದ ಚಾವಣಿಯುವರೆಗೂ ಪ್ರೇಕ್ಷಕರು ಕಿಕ್ಕಿರಿದು ತುಂಬಿದ್ದರು. ಎಲ್ಲರೂ ಫ್ಯಾಗಿನ್ನನ್ನು ತಿಂದುಬಿಡುವಂತೆ ನೋಡುವವರೇ ಹೊರತು, ಒಬ್ಬರ ಕಣ್ಣಲ್ಲಿಯಾದರೂ 'ಅಯ್ಯೋ ಪಾಪ' ಎಂಬ ಸೂಚನೆ ಕೂಡ ಕಂಡುಬರಲಿಲ್ಲ. ವಿಚಾರಣೆ ನಡೆದು, ಪಂಚಾಯತಿಯವರ ತೀರ್ಪನ್ನು ಕೇಳಿದಾಗ, ಅವರೆಲ್ಲರೂ ಒಮ್ಮತದಿಂದ ಅವನನ್ನು ಅಪರಾಧ ಮಾಡಿದವನೆಂದೇ ತೀರ್ಮಾನಿಸಿದರು. ಅದರಂತೆಯೇ ನ್ಯಾಯಾಧಿಪತಿ ಅವನನ್ನು ಗಲ್ಲಿಗೆ ಹಾಕತಕ್ಕದ್ದೆಂದು ಶಿಕ್ಷೆ ವಿಧಿಸಿದನು. ತನಗೆ ಏನಾದರೂ ದ್ರವ್ಯದಂಡ ವಿಧಿಸಬಹುದು, ಅಥವಾ ತನಗೆ ಕೆಲವು ವರ್ಷಗಳು ಕಾರಾಗೃಹವಾಸ ವಿಧಿಸಬಹುದು ಎಂದುಕೊಂಡಿದ್ದ ಫ್ಯಾಗಿನ್ನಿಗೆ ತನಗೆ ವಿಧಿಸಿದ ಮರಣದಂಡನೆಯ ವಾರ್ತೆ ಕೇಳಿ ಎದೆ ಒಡೆದುಹೋಯಿತು. ಒಡನೆಯೆ ಅವನಿಗೆ ಬುದ್ಧಿಯೂ ಕೆಟ್ಟುಹೋಯಿತು.

ಹೀಗೆ ಬುದ್ಧಿ ಕೆಟ್ಟು, ಫ್ಯಾಗಿನ್ ಒಬ್ಬನೇ ಸೆರೆಮನೆಯ ಒಂದು ಕತ್ತಲೆ ಕೋಣೆಯಲ್ಲಿ ಹುಚ್ಚನ ಹಾಗೆ ತನಗೆ ತಾನೇ ಮಾತನಾಡಿಕೊಳ್ಳು ತ್ತಿದ್ದಾಗ ಅವನನ್ನು ನೋಡುವುದಕ್ಕೆ ಬ್ರೌನ್ಲೋ ಮತ್ತು ಆಲಿವರ್ ಸೆರೆ ಮನೆಯ ಅಧಿಕಾರಿಯ ಅಪ್ಪಣೆಯನ್ನು ಪಡೆದು ಬಂದರು.

ಫ್ಯಾಗಿನ್ ತನಗೆ ತಾನೇ ಏನೋ ವಟಗುಟ್ಟುತ್ತ ಬಾಹ್ಯಜ್ಞಾನ ಶೂನ್ಯನಾಗಿ ಕುಳಿತಿದ್ದ. ಬ್ರೌನ್ಲೋ ಆಲಿವರನ್ನು ಕರೆದುಕೊಂಡು ಬಂದು ಎದುರಿಗೆ ನಿಂತಾಗ, ಅವನಿಗೆ ಕೊಂಚಕೊಂಚವಾಗಿ ಆಲಿವರನ ಗುರುತು ಹತ್ತಿತು. ಆಲಿವರನ್ನು ಕಂಡ ಮೇಲೆ ಫ್ಯಾಗಿನ್ನಿಗೆ ಏನೋ ಒಂದು ತರಹ ಧೈರ್ಯ. ಈ ಹುಡುಗನ ಸಹಾಯದಿಂದ ನಾನು ಬದುಕಿ ಕೊಳ್ಳಬಹುದು ಎಂಬಂತೆ ಅವನೊಡನೆ ರಹಸ್ಯವಾಗಿ ಮಾತನಾಡ ತೊಡಗಿದ.

ಹಾಗೇ ಮಾತನಾಡುವಾಗ, ಮಂಕ್ಸಿಗೂ ಆಲಿವರನಿಗೂ ಸಂಬಂಧಿ ಸಿದ ಕೆಲವು ಕಾಗದಪತ್ರಗಳನ್ನು ಫ್ಯಾಗಿನ್ ಏನು ಮಾಡಿದನೆಂದು ಬ್ರೌನ್ಲೋವಿನ ಪ್ರೇರಣೆಯಿಂದ ಆಲಿವರ್ ಕೇಳಿದಾಗ, "ನಾನು ಇದ್ದ ಮನೆಯ ಮುಂದಿನ ಕೋಣೆಯಲ್ಲಿ ಒಂದು ಮಸಿಕೊಳವೆಯಿದೆಯಲ್ಲ– ಅದರೊಳಗಿನ ಬಿಲದಲ್ಲಿ ಅದನ್ನು ಬಚ್ಚಿಟ್ಟಿದ್ದೇನೆ" ಎಂದು ಫ್ಯಾಗಿನ್ ಗುಟ್ಟನ್ನು ರಟ್ಟುಮಾಡಿದ.

ಬಂದ ಕೆಲಸವಾಯಿತು ಎಂದುಕೊಂಡು ಬ್ರೌನ್ಲೋ ಆಲಿವರನ್ನು ಕರೆದುಕೊಂಡು, ಸೆರೆಮನೆಯಿಂದ ಹೊರಟು, ಫ್ಯಾಗಿನ್ನಿನ ಗುಹೆಗೆ ಬಂದು ಅವನು ನಿರ್ದೇಶಿಸಿದ್ದ ಸ್ಥಳದಲ್ಲಿ ಸಿಕ್ಕಿದ ಕಾಗದಪತ್ರಗಳನ್ನು ವಶಪಡಿಸಿ ಕೊಂಡನು. ಆಲಿವರನ ಪೂರ್ವಚರಿತ್ರೆಯೇನು, ಅವನ ತಂದೆ ಬಿಟ್ಟು ಹೋದ ದೊಡ್ಡ ಆಸ್ತಿಯಲ್ಲಿ ಅವನಿಗೇನು ಭಾಗ ಎಂಬ ಈ ವಿಷಯಗಳು ಆ ಕಾಗದಪತ್ರದಲ್ಲಿ ಸ್ಪಷ್ಟವಾಗಿದ್ದುವು.

## ಹಳೆಯ ಕತೆ

ಈರೀತಿ ಆಲಿವರನ ಹಕ್ಕನ್ನು ಸ್ಥಾಪಿಸುವಂಥ ಸಾಕ್ಷ್ಯಗಳು ದೊರೆತ ಮಾರನೆಯ ದಿನವೇ ಫ್ಯಾಗಿನ್ನನ್ನು ಗಲ್ಲಿಗೆ ಹಾಕಿದರು. ಮರಣ ಭಯದಿಂದ ಬುದ್ಧಿ ಕೆಟ್ಟು, ದಯಾಭಿಕ್ಷೆಗಾಗಿ ಅಂಗಲಾಚಿ ಬೇಡುತ್ತ, ಫ್ಯಾಗಿನ್ ಹಗ್ಗದ ತುದಿಯಲ್ಲಿ ಸತ್ತ.

ಅದಾದ ಮಾರನೆಯ ದಿನ ಆಲಿವರ್ ಬ್ರೌನ್ಲೋವಿನ ಜೊತೆಯಲ್ಲಿ ತನ್ನ ಹುಟ್ಟಿದೂರಿಗೆ ಹೊರಟ. ಅವರು ಹೋಗುತ್ತಿದ್ದ ಕುದುರೆಯ ಗಾಡಿಯಲ್ಲಿ ಮಿಸೆಸ್ ಮೆಯ್ಲಿ, ರೋಸ್ ಮತ್ತು ಆಲಿವರನ್ನು ಆರೋಗ್ಯಕ್ಕೆ ನಡೆಸಿತಂದ ವೈದ್ಯ ಇವರೂ ಇದ್ದರು. ತಾವು ಆಲಿವರನ ಹುಟ್ಟಿದೂರಿಗೆ ಹೋಗುವುದು ಏಕೆ ಎಂಬುದು ಅವರೆಲ್ಲರಿಗೂ ತಿಳಿದಿತ್ತು.

ಊರಿಗೆ ಹತ್ತಿರ ಬಂದ ಹಾಗೆಲ್ಲ ಆಲಿವರನಿಗೆ ಹಿಂದಿನ ನೆನಪುಗಳು ಉಕ್ಕಿಉಕ್ಕಿ ಬಂದವು. ಗಾಡಿಯ ಕಿಟಕಿಯಲ್ಲಿ ತಲೆ ಚಾಚಿ, ರೋಸಿನ ಕೈಯನ್ನು ಹಿಡಿದೆಳೆದು, "ಅದೋ, ಅದೇ ಬೇಲಿಯನ್ನು ನಾನು ದಾಟಿ ಬಂದದ್ದು! ಅದೋ, ಅದೇ ಹಳ್ಳದಲ್ಲಿ ನಾನು ಅವಿತುಕೊಂಡದ್ದು! ಓ, ಅಲ್ಲಿ ದೂರದಲ್ಲಿ ಮನೆ ಕಾಣಿಸುತ್ತದಲ್ಲಾ, ಅಲ್ಲೇ ನಾನು ಇದ್ದದ್ದು. ಅಲ್ಲೇ ನನ್ನ ಪ್ರಿಯ ಸ್ನೇಹಿತ ಡಿಕ್ ನನ್ನನ್ನು ಆಶೀರ್ವದಿಸಿ ಬೀಳ್ಕೊಟ್ಟದ್ದು" ಎಂದು ಉತ್ಸಾಹದಿಂದ ಉದ್ದಕ್ಕೂ ಹೇಳುತ್ತ ಬಂದ.

ಆಲಿವರನಿಗೆ ಸಂತೋಷದಿಂದ ಕಣ್ಣುತುಂಬ ನೀರು. "ಡಿಕ್ಕನ್ನೂ ಇಲ್ಲಿಂದ ಕರೆದುಕೊಂಡು ಹೋಗೋಣ. ಅಲ್ಲವೆ, ರೋಸ್? ಪಾಪ, ಎಷ್ಟು ಕಷ್ಟಪಟ್ಟಿದ್ದಾನೋ? ನಾನು ಈ ಊರಿನಿಂದ ತಲೆತಪ್ಪಿಸಿ ಕೊಂಡು ಓಡಿಹೋದ ದಿವಸ 'ದೇವರು ನಿನ್ನನ್ನು ಕಾಪಾಡಲಿ' ಎಂದ, ರೋಸ್!" ಎಂದು ಅವನು ಹೇಳಿದುದಕ್ಕೆಲ್ಲ ರೋಸ್ ಅವನ ಬೆನ್ನನ್ನು

ಸವರುತ್ತ, "ಆಗಲಿ, ಆಗಲಿ" ಎಂದು ಅವನನ್ನು ಸಮಾಧಾನ ಮಾಡು ತ್ತಿದ್ದಳು.

ಊರು ಸಿಕ್ಕಿತು. ದಾರಿಯಲ್ಲಿ ಅನಾಥಾಲಯದ ಬಾಗಿಲನ್ನೂ, ಅಲ್ಲಿನ ದ್ವಾರಪಾಲಕನನ್ನೂ, ಸವರ್‌ಬೆರಿಯ ಅಂಗಡಿಯನ್ನೂ ಆಲಿವರ್ ಗುರುತಿಸಿದ. ಹಳೆಯ ನೆನಪು ಬಂದು, ಮೈ ಭಯದಿಂದ ಜುಮ್ಮೆಂದಿತು.

ಕುದುರೆಯ ಗಾಡಿ ಒಂದು ದೊಡ್ಡ ಹೋಟೆಲಿನ ಮುಂದೆ ನಿಂತಿತು. ಬಂದವರನ್ನು ಬರಮಾಡಿಕೊಳ್ಳುವುದಕ್ಕೆ ಗ್ರಿಮ್‌ವಿಗ್ ಸಿದ್ಧವಾಗಿ ನಿಂತಿದ್ದ. ಬಂದವರನ್ನೆಲ್ಲಾ ಒಳಕ್ಕೆ ಕರೆದುಕೊಂಡು ಹೋದ. ಒಳಗೆ ಮಂಕ್ಸಿನ ಮುಖ ಕಂಡು ಆಲಿವರ್ ಭಯದಿಂದ ಚೀರಿದ. ಬ್ರೌನ್ಲೊ ಅವನನ್ನು ಸಮಾಧಾನಗೊಳಿಸಿ, "ಹೆದರಬೇಡ, ಆಲಿವರ್. ಇವನು ನಿನ್ನ ಮಲ ಅಣ್ಣ" ಎಂದು ಹೇಳಿ, ಮಂಕ್ಸನ್ನು ಕುರಿತು "ಹೇಳು, ಹೇಳು, ನನಗೆ ಹೇಳಿದ ವಿಷಯವನ್ನೆಲ್ಲ ಇವರಿಗೂ ಹೇಳು" ಎಂದನು.

ಮಂಕ್ಸ್ ಹಿಡಿಗುಟ್ಟುತ್ತ "ನಮ್ಮ ತಂದೆ ರೋಂ ನಗರದಲ್ಲಿ ಕಾಯಿಲೆ ಮಲಗಿದಾಗ, ನನ್ನ ತಾಯಿ, ಅದುವರೆಗೆ ಅವನನ್ನು ಅಗಲಿದ್ದವಳು, ಅಲ್ಲಿಗೆ ಹೋದಳು. ಹೋಗುವಾಗ ನನ್ನನ್ನೂ ಕರೆದುಕೊಂಡು ಹೋದಳು. ನಾವು ಹೋಗುವ ವೇಳೆಗೆ ಅವನಿಗೆ ಪ್ರಜ್ಞೆ ತಪ್ಪಿತ್ತು, ನಮ್ಮ ಗುರುತೇ ಹತ್ತಲಿಲ್ಲ. ಮಾರನೆಯ ದಿನವೇ ಅವನು ಸತ್ತುಹೋದ. ಆದರೆ ಅವನ ಮೇಜಿನ ಒಳಗೆ ಎರಡು ಕಾಗದ ಇತ್ತು; ಅವನು ಕಾಯಿಲೆ ಮಲಗುವು ದಕ್ಕೆ ಹಿಂದಿನ ದಿವಸ ಬರೆದದ್ದು. ನಿನಗೆ, ಬ್ರೌನ್ಲೋಗೆ, ಬರೆದದ್ದು ಒಂದು; ಇನ್ನೊಂದು, ಈ ಆಲಿವರನ ತಾಯಿಗೆ ಬರೆದದ್ದು. ಇದಲ್ಲದೆ ಒಂದು ಮರಣಶಾಸನವೂ ಇತ್ತು. ಈ ಆಲಿವರನ ತಾಯಿಗೆ ಬರೆದ ಕಾಗದ ದಲ್ಲಿ, ಅಲ್ಲಲ್ಲೇ ಹೊಡೆದೂ ಹೊಡೆದೂ ತಿದ್ದಿ ಬರೆದು, ತಾನು ಬದುಕಿದ್ದರೆ ಅವಳಿಗೆ ಏನು ಮಾಡಬೇಕು ಎಂದಿದ್ದೇನೆ ಎಂಬುದನ್ನೆಲ್ಲಾ ವಿಶದವಾಗಿ

ವಿವರಿಸಿದ್ದ. ಅವನು ಅವಳಿಗೆ ಒಂದು ಪದಕವನ್ನೂ ಉಂಗುರವನ್ನೂ ಕೊಟ್ಟಿದ್ದನಂತೆ. ಅದನ್ನೂ ಆ ಕಾಗದವಲ್ಲಿ ಅವಳಿಗೆ ಜ್ಞಾಪಿಸಿದ್ದ" ಎಂದನು.

"ಅದಿರಲಿ. ಮರಣಶಾಸನದಲ್ಲಿ ಏನಿತ್ತು, ಹೇಳು" ಎಂದ, ಬ್ರೌನ್ಲೊ.

ಮಂಕ್ಸ್ ಮೌನವಾಗಿದ್ದ. ಆಗ ಬ್ರೌನ್ಲೊ ಮುಂದೇನಾಯಿತು ಎಂಬುದನ್ನು ತಾನೇ ಹೇಳಿದ.

"ಆಲಿವರನ ತಾಯಿಗೆ ಏನು ಕಾಗದ ಬರೆದಿದ್ದನೋ ಅದಕ್ಕೆ ಅನು ಸಾರವಾಗಿತ್ತು, ಆ ಮರಣಶಾಸನ. ಅಲ್ಲವೆ, ಮಂಕ್ಸ್? ಅದರಲ್ಲಿ ನಿನಗೂ ನಿನ್ನ ತಾಯಿಗೂ ಎಂಟುನೂರು ಪೌಂಡುಗಳ ವರ್ಷಾಶನವನ್ನು ಕೊಟ್ಟು, ಉಳಿದುದನ್ನು ತನ್ನ ಎರಡನೆಯ ಹೆಂಡತಿಗೂ ಅವಳ ಮಗನಿಗೂ ಹಂಚಿದ್ದ. ಅಲ್ಲವೆ, ಮಂಕ್ಸ್? ಆ ಮರಣಶಾಸನ ಎಲ್ಲಿ?"

"ನನ್ನ ತಾಯಿ ಅದನ್ನು ಸುಟ್ಟುಹಾಕಿದಳು. ಆದರೆ ಆ ಕಾಗದ ಗಳನ್ನೂ ಇತರ ರುಜುವಾತುಗಳನ್ನೂ ಭದ್ರವಾಗಿಟ್ಟುಕೊಂಡಿದ್ದಳು."

ಅನಂತರ ಬ್ರೌನ್ಲೊ ಅಲ್ಲಿದ್ದ ಇತರರನ್ನು ಕುರಿತು "ಇದಾದ ಕೆಲವು ವರ್ಷಗಳ ಮೇಲೆ ಈ ಮಂಕ್ಸಿನ ತಾಯಿ ನನ್ನ ಹತ್ತಿರ ಬಂದು, ತನ್ನ ಮಗನ ದುಷ್ಟ ಚೇಷ್ಟೆಗಳನ್ನೆಲ್ಲಾ ಹೇಳಿಕೊಂಡಳು. ಇವನು ತನಗೆ ಹದಿನೆಂಟು ವರ್ಷವಾದಾಗ ತನ್ನ ತಾಯಿಯ ಹತ್ತಿರ ಇದ್ದ ಹಣಕಾಸು ನಗನಾಣ್ಯಗಳನ್ನೆಲ್ಲ ಕದ್ದು, ಜೂಜಿನಲ್ಲಿ ಸೋತು, ತನ್ನ ದುಂದುವೆಚ್ಚದ ಸಾಲಗಳನ್ನು ತೀರಿಸಲಾರದೆ, ಲಂಡನ್ನಿಗೆ ಓಡಿಬಂದ. ಅಲ್ಲಿ ಎರಡು ವರ್ಷಗಳೊಳಗಾಗಿ ಎಲ್ಲಾ ರೀತಿಯ ಕಳ್ಳಕಾಕರ ಜೊತೆ ಸೇರಿ, ಮಾಡ ಬಾರದ ಅಕೃತ್ಯಗಳನ್ನು ಮಾಡಿದ. ಇವನ ತಾಯಿ ಯಾವುದೋ ಘೋರ ವಾದ ರೋಗಕ್ಕೆ ಗುರಿಯಾಗಿ. ತಾನು ಸಾಯುವ ಮೊದಲು ಇವನನ್ನು ನೋಡಿ ಸಾಯಬೇಕೆಂದು, ಇವನಿಗಾಗಿ ಎಲ್ಲೆಲ್ಲೋ ಹುಡುಕಿ, ಕೊನೆಗೆ ಕಂಡುಹಿಡಿದು, ಇವನನ್ನು ತನ್ನೊಡನೆ ಫ್ರಾನ್ಸಿಗೆ ಕರೆದುಕೊಂಡು

ಹೋದಳು" ಎಂದು ತಿಳಿಸಿ, "ಮುಂದೆ ಏನಾಯಿತು, ಮಂಕ್ಸ್?" ಎಂದು ಕೇಳಿದ.

ಮಂಕ್ಸ್ ಕತೆಯನ್ನು ಮುಂದುವರಿಸಿದ. "ಪ್ಯಾರಿಸ್ಸಿನಲ್ಲಿ ನನ್ನ ತಾಯಿ ಸತ್ತುಹೋದಳು. ಆದರೆ ಅವಳು ಸಾಯುವಾಗ ತನಗೆ ತಿಳಿದಿದ್ದ ರಹಸ್ಯಗಳನ್ನೆಲ್ಲಾ ನನ್ನ ಕಿವಿಯಲ್ಲಿ ಹೇಳಿದಳು. ನಮ್ಮ ತಂದೆಯ ಎರಡನೆಯ ಹೆಂಡತಿಯು ಎಲ್ಲಿಯೋ ತೀರಿಕೊಂಡಳೆಂದು ತಿಳಿದು ಬಂದಿದ್ದರೂ ಅವಳಿಗೆ ಒಂದು ಮಗುವಾಗಿ, ಆ ಮಗು ಬದುಕಿತ್ತೆಂದೂ ನನ್ನ ತಾಯಿಗೆ ಗೊತ್ತಾಗಿತ್ತು. ಆ ಮಗು ಬದುಕಿದ್ದರೆ, ನಮ್ಮ ಕೈಗೆ ಬಂದ ಆಸ್ತಿ ನಮಗೆ ದಕ್ಕುವ ಹಾಗಿರಲಿಲ್ಲ. ಆದ್ದರಿಂದ ಆ ಮಗುವನ್ನು ಹೇಗಾದರೂ ಕಂಡುಹಿಡಿದು, ಅದನ್ನು ನಾಶಮಾಡುತ್ತೇನೆಂದು ನಾನು ನನ್ನ ತಾಯಿಗೆ ವಚನವನ್ನು ಕೊಟ್ಟೆ. ಅದರಂತೆಯೇ ಆ ಮಾತನ್ನು ಉಳಿಸಿಕೊಳ್ಳಲು ಪ್ರಯತ್ನಮಾಡಿದೆ. ಆ ಹಾಳು ನ್ಯಾನ್ಸಿ ಬಾಯಿ ಮುಚ್ಚಿಕೊಂಡಿದ್ದಿದ್ದರೆ, ಈ ವೇಳೆಗೆ ನನ್ನ ಕೆಲಸ ಕೈಗೂಡುತ್ತಿತ್ತು."

ಬ್ರೌನ್ಲೊ "ಹೌದು, ಹೌದು. ನೀನು ಫ್ಯಾಗಿನ್ನಿನ ಸಹಾಯವನ್ನು ಕೋರಿ, ಅವನ ಮೂಲಕವಾಗಿ ಆಲಿವರನ ನಾಶವನ್ನು ಸಾಧಿಸಲು ಸರ್ವ ಸಾಹಸ ಮಾಡುತ್ತಿದ್ದೆಯೆಂಬುದನ್ನು ನಾ ಬಲ್ಲೆ" ಎಂದು ಹೇಳಿ, "ಆಲಿವರನ ತಾಯಿಯ ಪದಕವೂ ಉಂಗುರವೂ ಏನಾಯಿತು?" ಎಂದನು.

"ಆಲಿವರನ ತಾಯಿಯನ್ನು ಉಪಚರಿಸುತ್ತಿದ್ದ ದಾದಿಯ ಬಳಿಯಲ್ಲಿ ಅವು ಇದ್ದುವು. ಅದನ್ನು ಆ ದಾದಿಯ ಕೈಯಿಂದ ಕದ್ದುಕೊಂಡವರು ನನಗೆ ಅದನ್ನು ಮಾರಿದರು" ಎಂದ, ಮಂಕ್ಸ್.

ಆ ಸಮಯಕ್ಕೆ ಸರಿಯಾಗಿ ಗ್ರಿಮ್‌ವಿಗ್ ಬಂಬಲನ್ನೂ ಅವನ ಹೆಂಡತಿಯನ್ನೂ ಅಲ್ಲಿಗೆ ಕರೆದುಕೊಂಡು ಬಂದ.

"ಇವರೇ ತಾನೆ, ನಿನಗೆ ಆ ಪದಕವನ್ನೂ ಉಂಗುರವನ್ನೂ ಮಾರಿದ್ಧವರು?" ಎಂದು ಬ್ರೌನ್ಲೋ ಮಂಕ್ಸನ್ನು ಕೇಳಿದ.

"ಇವರೇ ಹೌದು" ಎಂದು ಮಂಕ್ಸ್ ಹೇಳಿದರೂ ಆ ಬಂಬಲ್ ದಂಪತಿಗಳು "ಇವನು ಯಾರೋ ನಮಗೆ ಗುರುತಿಲ್ಲ. ಯಾವ ಪದಕ? ಯಾವ ಉಂಗುರ?" ಎಂದು ಬಾಯಿಬಡಿದರು.

ಆದರೆ ಗ್ರಿಮ್‌ವಿಗ್ ಅವರ ಬಾಯಿ ಬಿಡಿಸುವುದಕ್ಕೆ ಬೇಕಾದ ಸಾಕ್ಷಿಗಳನ್ನೆಲ್ಲಾ ಸಿದ್ಧಪಡಿಸಿಕೊಂಡಿದ್ದ. ಅವನು ಕರೆದುಕೊಂಡು ಬಂದ ಇಬ್ಬರು ಮುತ್ತ್ರಮುದುಕಿಯರು ಬಂದು, "ಆ ಮುದಿ ದಾದಿ ಸತ್ತ ದಿವಸ ನೀವು ಮೆಲ್ಲಗೂ ಮಾತನಾಡಲಿಲ್ಲ, ಬಾಗಿಲ ಬಿರುಕುಗಳನ್ನೂ ಮುಚ್ಚಲಿಲ್ಲ. ನಿಮ್ಮ ಮಾತೆಲ್ಲ ನಮಗೆ ಕೇಳಿಸಿಹೋಯಿತು. ನೀವು ಆ ಮುದಿ ದಾದಿಯ ಕೈಯಿಂದ ಯಾವುದೋ ಒಂದು ಕಾಗದ ಕಿತ್ತುಕೊಳ್ಳಲಿಲ್ಲವೆ? ಮಾರನೆಯ ದಿವಸ ಗಿರವಿ ಅಂಗಡಿಗೆ ನೀವು ಹೋಗಲಿಲ್ಲವೆ?" ಎಂದರು.

ಆ ವೇಳೆಗೆ ಗ್ರಿಮ್‌ವಿಗ್ ಗಿರವಿ ಅಂಗಡಿಯವನನ್ನೂ ಒಳಕ್ಕೆ ಕರೆದುಕೊಂಡು ಬಂದ. ಅವನ ಮುಖವನ್ನು ನೋಡಿದಾಗ, ಬಂಬಲ್ "ಸರಿಯೆ. ಮಂಕ್ಸ್ ಇಷ್ಟು ಹೇಡಿಯಾಗಿ, ಎಲ್ಲವನ್ನೂ ಒಪ್ಪಿಕೊಂಡಿರುವುದಾದರೆ, ನಾನು ಏಕೆ ಯಾವುದನ್ನಾದರೂ ಮುಚ್ಚಿಡಬೇಕು? ಹೌದು, ನೀವು ತಿಳಿದಿರುವ ಹಾಗೆಯೇ ಆ ಪದಕವನ್ನೂ ಉಂಗುರವನ್ನೂ ನಾನು ಗಿರವಿ ಇಟ್ಟಿದ್ದು ನಿಜ, ಮಾರಿದ್ದೂ ನಿಜ. ಆದರೆ ಅದೇನು ಪುನಃ ನಿಮ್ಮ ಕೈಗೆ ಸಿಕ್ಕುವ ಹಾಗಿಲ್ಲ. ಏನು ಮಾಡುತ್ತೀರಿ?" ಎಂದ.

"ಆಗಿಹೋದುದಕ್ಕೆ ಏನು ಮಾಡುವುದು? ಆದರೆ ಮುಂದೆ ನೀವು ಇಂತಹ ಚೇಷ್ಟೆ ಮಾಡದ ಹಾಗೆ ನಿಮ್ಮನ್ನು ಇದುವರೆಗೆ ಇದ್ದ ಅಧಿಕಾರದಿಂದ ತೆಗೆದುಹಾಕಲಾಗಿದೆ" ಎಂದು ಬ್ರೌನ್ಲೊ ಅವರನ್ನು ಕೊಟಡಿಯಿಂದ ಆಚೆ ಕಳಿಸಿದ.

ಅನಂತರ ಬ್ರೌನ್ಲೊ ರೋಸಿನ ಕೈಯನ್ನು ಹಿಡಿದುಕೊಂಡು, ಮಂಕ್ಸಿನ ಕಡೆ ತಿರುಗಿ, "ಈಕೆ ಯಾರು, ಗೊತ್ತೆ, ನಿನಗೆ?" ಎಂದು ಕೇಳಿ, "ಆಲಿವರನ ತಾಯಿಯ ತಂದೆಗೆ ಇಬ್ಬರು ಹೆಣ್ಣುಮಕ್ಕಳಿದ್ದರು.

ಒಬ್ಬಳ ಕತೆಯನ್ನು ಇದುವರೆಗೆ ಹೇಳಿದ್ದೀಯೆ. ಇನ್ನೊಂದು ಮಗು ಏನಾಯಿತು, ಗೊತ್ತೆ?" ಎಂದ.

ಅದಕ್ಕೆ ಮಂಕ್ಸ್ "ಆ ಮಕ್ಕಳ ತಂದೆ ಸತ್ತಾಗ, ಆ ಎರಡನೆಯ ಮಗುವನ್ನು ಯಾರೋ ಎತ್ತಿಕೊಂಡು ಬೆಳೆಸಿದರಂತೆ. ನನ್ನ ತಾಯಿ ಆ ವಿಷಯವನ್ನು ತಿಳಿದು, ಒಂದು ವರ್ಷಕಾಲ ಹುಡುಕಾಡಿ ಆ ಮಗುವನ್ನು ಕಂಡು, ಆ ಮಗುವಿನ ದುರ್ಬಲವಾದ ಸ್ಥಿತಿಯನ್ನು ನೋಡಿ, ಅದು ಬದುಕುವ ಹಾಗಿಲ್ಲವೆಂದು ತೃಪ್ತಿಪಟ್ಟುಕೊಂಡಳು. ಆದರೆ ಯಾರೋ ಒಬ್ಬಳು ಹಣವಂತಳಾದ ಮುದುಕಿ, ಆ ಮಗುವನ್ನು ಕಂಡು, ಕನಿಕರದಿಂದ ಅದನ್ನು ತನ್ನ ಮನೆಗೆ ಕರೆದುಕೊಂಡುಹೋಗಿ ಪಾಲಿಸಿದಳಂತೆ. ಆ ಹುಡುಗಿಯನ್ನು ಅನೇಕ ವರ್ಷಕಾಲ ನಾನು ಪುನಃ ಕಾಣಲಿಲ್ಲ" ಎಂದ.

"ಈಚೆಗೆ ಎಲ್ಲಾದರೂ ಕಂಡುದುಂಟೊ?"

"ಇದೋ, ಇವಳೇ, ಈಗ ನಿನ್ನ ತೋಳಿನ ಮೇಲೆ ಒರಗಿಕೊಂಡಿರುವ ಈ ರೋಸ್; ಇವಳೇ ಆ ಎರಡನೆಯ ಮಗಳು."

ಮಂಕ್ಸ್ ಹೀಗೆ ಹೇಳಿದೊಡನೆ ಆಲಿವರ್ ಓಡಿಹೋಗಿ, ರೋಸನ್ನು ತಬ್ಬಿಕೊಂಡು ಸಂತೋಷದಿಂದ ಅತ್ತುಬಿಟ್ಟ. ರೋಸ್ ತಾನೂ ಅತ್ತುಬಿಟ್ಟಳು.

"ಹೌದು, ಇವಳೇ ನಿನ್ನ ಚಿಕ್ಕಮ್ಮ" ಎಂದ, ಬ್ರೌನ್ಲೊ.

"ಇಲ್ಲ, ಇಲ್ಲ. ಇವಳನ್ನು ನಾನು ಚಿಕ್ಕಮ್ಮ ಎಂದು ಕರೆಯುವುದಿಲ್ಲ. ಇವಳು ನನ್ನ ಅಕ್ಕ" ಎಂದು ಆಲಿವರ್ ಸಂತೋಷದಿಂದ ಅಳುತ್ತಾ ಹೇಳಿದ.

ಆ ದೃಶ್ಯವನ್ನು ಕಂಡು, ಮಿಸೆಸ್ ಮೆಯ್ಲಿ, ಬ್ರೌನ್ಲೊ ಮುಂತಾದವರ ಕಣ್ಣು ಕೂಡ ತೇವವಾಯಿತು.

## ಇನ್ನು ಉಳಿದ ಕತೆ

ಇನ್ನು ಉಳಿದ ಕತೆ ಸ್ವಲ್ಪವೇ.

ಹುಟ್ಟಿದೊಡನೆಯೆ ತಾಯಿಯನ್ನು ತಿಂದುಕೊಂಡು ತಬ್ಬಲಿಯಾಗಿ, ಪಡಬಾರದ ಪಾಡುಪಟ್ಟು ಆಲಿವರ್ ಕಡೆಗೆ ತನ್ನ ತಂದೆ ಬಿಟ್ಟುಹೋದ ಆಸ್ತಿಯನ್ನು ಪಡೆದು, ತನ್ನ ತಾಯಿಯ ತಂಗಿಯನ್ನು ಸೇರಿದನಷ್ಟೆ. ಇದಾದ ಮೂರು ತಿಂಗಳು ಕಳೆಯುವುದರೊಳಗಾಗಿ ಮಿಸೆಸ್ ಮೆಯ್ಲಿಯ ಮಗನಾದ ಹ್ಯಾರಿ ಮೆಯ್ಲಿ ಎಂಬವನು ರೋಸನ್ನು ಮದುವೆಮಾಡಿಕೊಂಡ. ಮಿಸೆಸ್ ಮೆಯ್ಲಿ ತನ್ನ ಮಗ, ಸೊಸೆ ಇವರೊಡನೆ ಆಲಿವರನ ಅಭಿವೃದ್ಧಿಯಲ್ಲಿ ಆಸಕ್ತಳಾಗಿ ಸುಖವಾಗಿದ್ದಳು.

ಆಲಿವರನಿಗೆ ಕಷ್ಟಕಾಲದಲ್ಲಿ ದಿಕ್ಕಾಗಿ ನಿಂತು, ಅವನ ನಿಜಸ್ಥಿತಿಯನ್ನೆಲ್ಲಾ ಶೋಧಿಸಿ, ಅವನನ್ನು ಇಷ್ಟುಮಟ್ಟಿಗೆ ಮುಂದಕ್ಕೆ ತಂದು ಬ್ರೌನ್ಲೊ, ಮಂಕ್ಸ್ ಕೂಡ ಆಲಿವರನ ಹಾಗೆಯೇ ತನ್ನ ಹಳೆಯ ಸ್ನೇಹಿತನ ಮಗನೆಂಬುದನ್ನು ನೆನೆದು, ಆಸ್ತಿಯಲ್ಲಿ ಅವನಿಗೂ ಅರ್ಧವನ್ನು ಕೊಡಿಸಿಕೊಟ್ಟ. ಮರಣಶಾಸನದ ಪ್ರಕಾರ ಆಸ್ತಿಯೆಲ್ಲವೂ ಆಲಿವರನಿಗೇ ಬರಬೇಕಾಗಿದ್ದರೂ, ಆಲಿವರ್ ತನ್ನ ಮಲಅಣ್ಣನಿಗೆ ಅರ್ಧವನ್ನು ಕೊಡಲು ಸಂತೋಷದಿಂದ ಒಪ್ಪಿದನು. ಆದರೇನು? ನಾಯಿಬಾಲ ಎಷ್ಟು ತೀಡಿದರೂ ಸೊಟ್ಟಗೇ! ಮಂಕ್ಸ್ ತನ್ನ ಹೆಸರು ಬದಲುಮಾಡಿಕೊಂಡು, ಬೇರೆ ದೇಶಕ್ಕೆ ಹೋಗಿ, ತನ್ನ ಪಾಲಿಗೆ ಬಂದುದನ್ನೆಲ್ಲಾ ಅಪವ್ಯಯ ಮಾಡಿ, ಪುನಃ ಹಳೆಯ ಚಾಳಿಗೇ ಬಿದ್ದು, ಕೊನೆಗೆ ಸೆರೆಮನೆಯಲ್ಲಿ ಸತ್ತುಹೋದ.

ಆಲಿವರನ್ನು ಮಾತ್ರ ಬ್ರೌನ್ಲೊ ತನ್ನ ಸ್ವಂತ ಮಗನೆಂಬಂತೆ ಭಾವಿಸಿ, ಅವನನ್ನು ತನ್ನ ಮನೆಯಲ್ಲೇ ಇಟ್ಟುಕೊಂಡ. ಅವನ ಮನೆ ಮಿಸೆಸ್ ಮೆಯ್ಲಿಯ ಮನೆಯಿಂದ ಒಂದು ಮೈಲಿಯ ದೂರದಲ್ಲಿತ್ತು.

ಹಾಗಾಗಿ, ಆಲಿವರ್ ಆಗ ಆ ಮನೆಯಲ್ಲಿ, ಈಗ ಈ ಮನೆಯಲ್ಲಿ ಎಂಬಂತೆ ಎರಡೂ ಮನೆಗಳಲ್ಲಿ ಸುಖವಾಗಿದ್ದನು.

ಆದರೆ ಆ ಉಳಿದವರ ಗತಿ ಏನಾಯಿತು? ಬಂಬಲ್ ಮತ್ತು ಅವನ ಹೆಂಡತಿ? ಅನಾಥಾಲಯದಲ್ಲಿ ತಮಗಿದ್ದ ಸ್ಥಾನವನ್ನು ಕಳೆದುಕೊಂಡು, ತೀರ ನಿರ್ಗತಿಕರಾಗಿ, ಮೈಗೆ ಬಟ್ಟೆಯಿಲ್ಲದೆ, ಹೊಟ್ಟೆಗೆ ಕೂಳಿಲ್ಲದೆ, ಮೊದಲು ಯಾವ ಅನಾಥಾಲಯದಲ್ಲಿ ತಾವು ಮಕ್ಕಳನ್ನು ಪೀಡಿಸುತ್ತಿದ್ದರೋ ಅದೇ ಆಲಯಕ್ಕೆ ಅನಾಥರಾಗಿ ಬಂದು ಸೇರಿ, ನರಳಿ ನರಳಿ ಸತ್ತುಹೋದರು.

ಆಲಿವರನ್ನು ಪೀಡಿಸುತ್ತಿದ್ದ ನೋಹಾ ಕ್ಲೇಪೋಲ್ ಫ್ಯಾಗಿನ್ನಿಗೆ ವಿರುದ್ಧವಾಗಿ ಸರಕಾರದ ಪರವಾಗಿ ಸಾಕ್ಷ್ಯಹೇಳಿ, ಫ್ಯಾಗಿನ್ನನ್ನು ಗಲ್ಲಿಗೇರಿಸುವುದಕ್ಕೆ ಸಹಾಯಮಾಡಿದ. ಅದಕ್ಕೋಸ್ಕರ ನೋಹನಿಗೆ ಏನೂ ಶಿಕ್ಷೆಯಾಗದೆ, ಅವನ ಬಿಡುಗಡೆಯಾಯಿತು. ಮುಂದೆ ಅವನು ಏನಾದನೋ ಯಾರಿಗೂ ತಿಳಿಯಲಿಲ್ಲ.

ಕಳ್ಳಕೊರಮ ಎಂದಿನಂತೆ ಯಾರ ಜೇಬನ್ನೋ ಕದಿಯುವುದಕ್ಕೆ ಹೋಗಿ, ಸಿಕ್ಕಿಬಿದ್ದ. ಆ ಕಾಲದಲ್ಲಿ ಹೀಗೆ ಕಳ್ಳತನಮಾಡಿ ಸಿಕ್ಕಿಕೊಂಡವರನ್ನು ಸಮುದ್ರದಾಚೆಗೆ ಗಡೀಪಾರು ಮಾಡುತ್ತಿದ್ದರು. ಕಳ್ಳಕೊರಮನಿಗೂ ಅದೇ ಗತಿಯಾಯಿತು.

ಆದರೆ, ಫ್ಯಾಗಿನ್ನಿನ ಕೂಟಕ್ಕೆ ಸೇರಿದವರಲ್ಲೆಲ್ಲ ಚಾರ್ಲಿ ಬೇಟ್ಸ್ ಒಬ್ಬ ಮಾತ್ರ, ಸೈಕ್ಸಿನ ಗತಿ ಏನಾಯಿತೆಂಬುದನ್ನು ಕಣ್ಣಾರ ಕಂಡವನು, ತಾನು ಅದುವರೆಗೆ ನಡೆಸುತ್ತಿದ್ದ ಪಾಪಜೀವನಕ್ಕೆ ಭಯಪಟ್ಟು, ತನ್ನ ನಡತೆಯನ್ನು ತಿದ್ದಿಕೊಳ್ಳತೊಡಗಿದ. ಬಹುವಾಗಿ ಕಷ್ಟಪಟ್ಟು, ಕಡೆಗೆ ತಾನೂ ಒಬ್ಬ ಸಭ್ಯಗೃಹಸ್ಥನಾಗಿ, ಅಂದಿನಿಂದ ಸುಖವಾಗಿದ್ದ.

ಕಥಾನಾಯಕನಾದ ಆಲಿವರ್ ಅಂತೂ ತನ್ನ ಸಾಕುತಂದೆಯಾದ ಬ್ರೌನ್ಲೋವಿನ ನೇತೃತ್ವದಲ್ಲಿ ತುಂಬ ವಿದ್ಯಾವಂತನಾಗಿ, ತುಂಬ ಬುದ್ಧಿ

ವಂತನಾಗಿ, ತನ್ನನ್ನು ಕರುಣೆಯಿಂದ ಕಾಪಾಡಿದ ದೈವವನ್ನು ಮರೆಯದೆ, ತನ್ನ ಸುತ್ತಮುತ್ತಿನವರೆಲ್ಲರನ್ನೂ ಅದೇ ರೀತಿಯ ಕರುಣೆಯಿಂದ ಕಾಣುತ್ತ, ತುಂಬು ಜೀವನವನ್ನು ಬಾಳಿ, ತನ್ನ ಆಯುಸ್ಸು ಮುಗಿದ ಮೇಲೆ ಭಗವಂತನ ಪಾದಾರವಿಂದವನ್ನು ಸೇರಿದನು.